# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು
ಎಚ್ಚೆಸ್ಕೆ

ಸಂಪುಟ ೧೦
ಸಂಚಿಕೆ ೧

ಮಾರ್ಚ್
೧೯೮೯

ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕಿಂಗ್ ಪ್ರಪಂಚ

ಸಂಪುಟ ೧೦ | ಮಾರ್ಚ್ ೧೯೮೯ | ಸಂಚಿಕೆ ೧



# ಭಾರತೀಯ ಬ್ಯಾಂಕಿಂಗ್—೨೦೦೧

ಭವಿಷ್ಯ ನುಡಿಯುವುದು ಮಹಾ ಅಪಾಯಕಾರಿ ಹವ್ಯಾಸ. ಹೇಳಿದಂತೆಯೇ ಆದೀತೆಂಬ ಭರವಸೆಯಿಲ್ಲ. ಹೇಳಿದ ದಿಕ್ಕಿನಲ್ಲಿ ಘಟನೆಗಳು ಸಂಭವಿಸುವ ಪ್ರವೃತ್ತಿ ತೋರಿದರೂ ಸಾಕು. ಮಿಥ್ಯೆಯ ಆರೋಪಕ್ಕೆ ಗುರಿಯಾಗದಿರಬಹುದು. ಕರಾರುವಾಕ್ಕಾಗಿ ಭವಿಷ್ಯ ನುಡಿಯುವುದಂತೂ ಯಾರಿಗೂ ಸಾಧ್ಯವಾಗದು. ಆದರೆ ಇದುವರೆಗೆ ನಡೆದುಬಂದ ಹಾದಿ ಎಂಥದು, ಯಾವಯಾವ ಬಗೆಯ ಪ್ರಕ್ರಿಯೆಗಳುಂಟಾಗುತ್ತಿವೆ, ಇವೆಲ್ಲವನ್ನೂ ಅನುಲಕ್ಷಿಸಿದಾಗ ಮುಂದಿನ ಬೆಳವಣಿಗೆ ಯಾವ ರೀತಿಯಲ್ಲಾಗಬಹುದು, ಆ ಹಾದಿಯಲ್ಲಿ ಎದುರು ನಿಲ್ಲುವ ಸವಾಲುಗಳು ಎಂಥವು, ಅವನ್ನು ಎದುರಿಸುವ ಬಗೆ ಹೇಗೆ, ಸದಾ ಪ್ರವರ್ತನಶೀಲವಾಗಿರುವ ನಾನಾ ಕ್ರಿಯೆ-ಪ್ರತಿಕ್ರಿಯೆಗಳ ಫಲವಾಗಿ ಮುಂದೆ ಪರಿಸ್ಥಿತಿಯಲ್ಲಿ ಎಂಥ ಬದಲಾವಣೆಯನ್ನು ನಿರೀಕ್ಷಿಸಬಹುದು—ಎಂಬುದನ್ನಂತೂ ಹೇಳಲು ಯತ್ನಿಸಬಹುದು. ಇದು ಗ್ರಹಗಳನ್ನು ಗುಣಿಸಿ ಹೇಳುವ ಹವ್ಯಾಸವಲ್ಲ. ವ್ಯಾಪಕ ಹಾಗೂ ಸೂಕ್ಷ್ಮ ಅವಲೋಕನ ಅಧ್ಯಯನ ಚಿಂತನಗಳ ಆಧಾರದ ಮೇಲೆ ಭವಿಷ್ಯದ ಒಂದು ಸ್ಥೂಲಚಿತ್ರಣ. ಈ ಬಗೆಯ ಪ್ರಯತ್ನದ ಫಲವಾಗಿ ಭವಿಷ್ಯವಿಜ್ಞಾನ (fnturology) ಎಂಬ ಒಂದು ಶಾಸ್ತ್ರವೇ ಇಂದು ರೂಪುದಳೆದಿದೆ.

## ನಿರೀಕ್ಷೆ, ಸವಾಲು

ಭಾರತದಲ್ಲಿ ಬ್ಯಾಂಕಿಂಗು ಇದುವರೆಗೆ ಬೆಳೆದು ಬಂದಿರುವ ರೀತಿಯನ್ನೂ, ಇಂದು ನಡೆಯುತ್ತಿರುವ ನಾನಾ ಪ್ರಯೋಗಗಳನ್ನೂ, ಅದು ತಳೆಯುತ್ತಿರುವ ಅವಸ್ಥೆಯನ್ನೂ ಗಮನಿಸಿ, ಇನ್ನು ಹತ್ತು ಹನ್ನೆರಡು ವರ್ಷಗಳಲ್ಲಿ—ಎಂದರೆ ಇಪ್ಪತ್ತೊಂದನೆಯ ಶತಮಾನದ ಆರಂಭದ ವೇಳೆಗೆ—ಅದು ಹೇಗಿರುತ್ತದೆ? ಹೇಗೆ ವರ್ತಿಸುತ್ತದೆ? ಕಾ ಭಾಷಾ? ಕಿಂ ಪ್ರಭಾಷೇತ ? ಕಿಮಾಸೀತ ? ವ್ರಜೇತ ಕಿಮ್? ಎಂಬುದನ್ನು ಹೇಳಬಹುದೆ ?

ಇನ್ನು ಹತ್ತು-ಹನ್ನೆರಡು ವರ್ಷಗಳಲ್ಲಿ ಬ್ಯಾಂಕಿಂಗ್ ಹೇಗಿರುತ್ತದೆ. ಅದರ ಮುಂದೆ ಇಡಲಾದ ನಿರೀಕ್ಷೆ ಎಂಥದು, ಸವಾಲುಗಳು ಯಾವುವು, ಪರಿಹಾರಗಳು ಹೇಗೆ, ಈ ಸವಾಲುಗಳನ್ನೇ ಸದವಕಾಶಗಳಾಗಿ ಪರಿವರ್ತಿಸಿಕೊಳ್ಳುವ ಬಗೆಯೆಂತು ಎಂಬುದನ್ನು ಕುರಿತು ಚಿಂತಿಸುವ ಮೊದಲು ಕಳೆದ ಎರಡು ದಶಕಗಳಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯಲ್ಲಾಗಿರುವ ಮಾರ್ಪಾಟುಗಳನ್ನು ನೋಡಬೇಕು. ಎರಡು ದಶಕಗಳ ಹಿಂದೆ ದೇಶದ ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿದಾಗ ಮುಂದಿನ ಹತ್ತು ವರ್ಷಗಳಲ್ಲಿ ಏನೇನಾಗಬಹುದೆಂಬುದರ ಕಲ್ಪನೆ ಯಾರಿಗೂ ಅಷ್ಟಾಗಿ ಇರಲಿಲ್ಲ. ಅಲ್ಲಿಂದ ಮುಂದಿನ ಹತ್ತು ವರ್ಷಗಳಲ್ಲಿ ಆಗುವ ಬದಲಾವಣೆಗಳನ್ನು ಮೊದಲ ಹತ್ತು ವರ್ಷಗಳಲ್ಲಿ ಊಹಿಸಿರಲಿಲ್ಲ. ಇಡೀ ಬ್ಯಾಂಕಿಂಗ್ ವ್ಯವಸ್ಥೆಯಲ್ಲೇ ಸಾಗರಸದೃಶ ಪರಿವರ್ತನೆ ಆಗಿದೆಯೆಂಬುದಂತೂ ನಿಜ. ಈ ಎರಡು ದಶಕಗಳ ಅನುಭವದ ಮೇಲೆ ಹೇಳುವುದಾದರೆ, ಮುಂದಿನ ಹತ್ತು ವರ್ಷಗಳ ಬದಲಾವಣೆಯ ಸ್ವರೂಪ ಕಳೆದ ಎರಡು ದಶಕಗಳದಕ್ಕಿಂತ ತೀರ ಭಿನ್ನವಾಗಿರುತ್ತದೆಯೆನ್ನಬಹುದು. ಈ ಮೂರೂ ದಶವಾರ್ಷಿಕ ಅವಧಿಗಳಿಗೆ ಸಮಾನವಾದ ಒಂದು ಲಕ್ಷಣವೆಂದರೆ ಬದಲಾವಣೆಯೇ.

## ಎರಡು ದಶಕ

ಕಳೆದ ಎರಡು ದಶಕಗಳಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಆಗಿರುವ ಬೆಳವಣಿಗೆಯನ್ನು ಇಲ್ಲಿ ಗುರುತಿಸಬಹುದು. ಬ್ಯಾಂಕ್ ಶಾಖೆಗಳ ಸಂಖ್ಯೆ ಸುಮಾರು ಎಂಟೂ ಕಾಲು ಸಾವಿರ ಇದ್ದದ್ದು ಈಗ ಐವತ್ತಾರುಸಾವಿರವಾಗಿದೆ. ಅಂತೆಯೇ ಒಟ್ಟು ಠೇವಣಿಗಳೂ ಮುಂಗಡಗಳೂ ಬೆಳೆದಿವೆ. ಬ್ಯಾಂಕುಗಳ ಕಾರ್ಯನಿರತ ನಿಧಿಗಳು ಇಪ್ಪತ್ತರಷ್ಟು, ಭಾರತೀಯ ರಿಸರ್ವ್ ಬ್ಯಾಂಕಿನಲ್ಲಿ ಅವುಗಳ ನಗದು ಶಿಲ್ಕು ಮೂವತ್ತರಷ್ಟು, ಪ್ರತಿಭೂತಿಗಳ ಪೋರ್ಟ್‌ಫೋಲಿಯೋ ಮೂವತ್ತೈದರಷ್ಟು, ಮುಂಗಡಗಳ ಪೋರ್ಟ್‌ಫೋಲಿಯೋ ಹದಿನೆಂಟು ಪಟ್ಟು ಆಗಿವೆ. ಉದರಿ-ಠೇವಣಿ ಅನುಪಾತ 70-90ರ ನಡುವೆ ಇದ್ದದ್ದು ಈಗ 50-60ರಲ್ಲಿದೆ. ನಿಧಿಗಳ ಪ್ರವಿಸ್ತರಣದ (deployment)

ಪ್ರಾಮುಖ್ಯವೂ ಹೆಚ್ಚಿದೆ. ಮುಂಗಡಗಳೊಂದಿಗೆ ವಿನಿಯೋಜನೆ (investment) ಸ್ಪರ್ಧಿಸುತ್ತಿದೆ. ಠೇವಣಿಗಳು, ಮುಂಗಡಗಳು, ವಿನಿಯೋಜನೆಗಳು, ಎತ್ತಿದ ಸಾಲಗಳು ಮುಂತಾದವುಗಳ ಮಿಶ್ರಣಗಳಲ್ಲೂ (mixes) ಬಹಳಷ್ಟು ಬದಲಾವಣೆಗಳಾಗಿವೆ. ಬ್ಯಾಂಕಿಂಗ್ ಉದ್ಯಮದ ದುಡಿಯುವ ನಿಧಿಗಳ ಗಾತ್ರ, ಸ್ವರೂಪ, ಮೂಲ, ಬಳಕೆ ಮುಂತಾದ ಎಲ್ಲ ವಿಚಾರಗಳಲ್ಲೂ ಅಗಾಧವಾದ ಬದಲಾವಣೆಗಳು ಸಂಭವಿಸಿವೆ. ಇಷ್ಟೆಲ್ಲ ಪರಿಮಾಣಾತ್ಮಕ ಪರಿವರ್ತನೆಗಳಾಗಿದ್ದರೂ ಬ್ಯಾಂಕಿಂಗ್ ಸಂಸ್ಥೆಗಳ ಸಂಖ್ಯೆ ಹೆಚ್ಚಾಗಿಲ್ಲ. ಹೊಸ ಬ್ಯಾಂಕುಗಳ ಸ್ಥಾಪನೆಯಾಗಿಲ್ಲ. ಹಳೆಯವೇ ವಿಸ್ತರಿಸಿವೆ, ಶಾಖೆಗಳನ್ನು ಹೆಚ್ಚಿಸಿಕೊಂಡಿವೆ. ಆದರೆ ಗಾತ್ರದೊಂದಿಗೆ ಗುಣದಲ್ಲಿ ಸುಧಾರಣೆಯಾಗಿದೆಯೆ ? ಎಂಬ ಪ್ರಶ್ನೆಗೆ ಸಮರ್ಪಕ ಉತ್ತರ ದೊರಕಲಾರದೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ.

## ಊಹಾಂದಾಜು

ಈ ಶತಮಾನದ ಕೊನೆಯ ವೇಳೆಗೆ ಆಗಬಹುದಾದ ಬೆಳವಣಿಗೆಯ ಬಗ್ಗೆ ಈಗಾಗಲೇ ಊಹಾಂದಾಜುಗಳನ್ನು (guesstimates) ಮಾಡಲಾಗುತ್ತಿದೆ. ಬ್ಯಾಂಕ್ ಶಾಖೆಗಳ ಸಂಖ್ಯೆ ಒಂದು ಲಕ್ಷವಾದರೂ ಆಗಬಹುದು. ದೇಶದ ಜನಸಂಖ್ಯೆಯೂ ಈ ಅವಧಿಯಲ್ಲಿ ಅಗಾಧವಾಗಿ ಬೆಳೆದರೂ ಸರಾಸರಿಯಲ್ಲಿ ಪ್ರತಿ 10.000 ಜನಕ್ಕೆ ಒಂದು ಬ್ಯಾಂಕ್ ಶಾಖೆ ಇರುತ್ತದೆ. ಬ್ಯಾಂಕ್ ಠೇವಣಿಗಳು ರೂ. 2.60.000 ಕೋಟಿಗೂ ಮುಂಗಡಗಳು ರೂ. 1.66.000 ಕೋಟಿಗೂ ಏರಬಹುದೆಂದು ಪ್ರಕ್ಷೇಪಿಸಲಾಗಿದೆ. ಈಗ ಅವು ಏರುತ್ತಿರುವ ಗತಿಯನ್ನು ನೋಡಿದರೆ ಈ ಅಂಕಿಗಳನ್ನು ದಾಟಿ ಮುನ್ನಡೆಯುವುವೆಂದೇ ತೋರುತ್ತದೆ. ಆದ್ಯತಾವಲಯಗಳಿಗೆ ನೀಡಿದ ಸಾಲ 1969ರಲ್ಲಿ ರೂ. 505 ಕೋಟಿಯಾಗಿದ್ದುದು 1984ರ ವೇಳೆಗೆ ರೂ. 21.420 ಕೋಟಿಗೆ ಏರಿತು. ಈ ಶತಮಾನದ ಅಂತ್ಯದ ವೇಳೆಗೆ ಇದು ರೂ. 83,000 ಕೋಟಿಗೆ ನೆಗೆಯುವುದೆಂದೂ ಇದು ಒಟ್ಟು ಮುಂಗಡಗಳ ಅರ್ಧದಷ್ಟು ಆಗಿದ್ದೀತೆಂದೂ ನಿರೀಕ್ಷಿಸಲಾಗಿದೆ. ಇದು ಅಸಂಭವವೇನೂ ಅಲ್ಲ.

ಬ್ಯಾಂಕಿಂಗ್ ವಲಯದಲ್ಲಿ ಆಗುತ್ತಿರುವ, ಆಗಲಿರುವ ಈ ಅಗಾಧ ವಿಸ್ತರಣೆಯೇ ಹಲವಾರು ಸವಾಲುಗಳನ್ನೂ ಸಮಸ್ಯೆಗಳನ್ನೂ ಸೃಷ್ಟಿಸುತ್ತದೆಂಬುದು ನಿರ್ವಿವಾದ. ವ್ಯವಸ್ಥೆಯಲ್ಲೇ, ಸಂರಚನೆಯಲ್ಲೇ ಮಹಾಬದಲಾವಣೆಗಳನ್ನು ಮಾಡಬೇಕಾಗುತ್ತದೆ. ಬ್ಯಾಂಕಿಂಗ್ ಕಲಾಪಗಳ ಸ್ವರೂಪಗಳನ್ನೂ ಬಹಳಷ್ಟು ಬದಲಿಸುವುದು ಅನಿವಾರ್ಯ. ಗ್ರಾಹಕ ಸೇವಾ ಮಟ್ಟ, ಹೊಸ ಮಾಹಿತಿ ತಂತ್ರಜ್ಞಾನ, ಕಲಾಪಗಳ ವಿಶೇಷೀಕರಣ, ಕೃಷಿ ಚಟುವಟಿಕೆ, ಸಾಂಸ್ಥಿಕ ವಲಯ, ಸಣ್ಣ ಉದ್ಯಮ—ಹೀಗೆ ಎಲ್ಲ ನಿಟ್ಟುಗಳಲ್ಲೂ ಕ್ರಾಂತಿಯನ್ನೇ ತರಬೇಕಾಗುತ್ತದೆ.

## ಸದ್ಯದ ಪರಿಸ್ಥಿತಿ

ದಶಕದಾಚೆಗಿನ ದೃಶ್ಯದತ್ತ ನೋಟ ಹರಿಸುವ ಮುನ್ನ ಸದ್ಯದ ಪರಿಸ್ಥಿತಿಯನ್ನಷ್ಟು ವಿವರವಾಗಿ ಪರಿಶೀಲಿಸೋಣ. ರಾಷ್ಟ್ರೀಕರಣದ ಅನಂತರ ಆಗಿರುವ ಮಹತ್ತ್ವದ ಬದಲಾವಣೆಯೆಂದರೆ ಬ್ಯಾಂಕುಗಳ ಕಾರ್ಯಭಾರದ ವಿಸ್ತರಣೆ. ಅವು ಇಂದು ಇಬ್ಬಗೆಯ ಕಾರ್ಯಭಾರ ನಿರ್ವಹಿಸುತ್ತಿವೆ. ಪರಂಪರೆಯಾಗಿ ಬಂದ, ಠೇವಣಿ ಸ್ವೀಕರಣೆ ಮತ್ತು ಮುಂಗಡ ನೀಡಿಕೆಯ ಕಾರ್ಯಭಾರವಂತೂ ಮುಂದುವರಿದೇ ಇದೆ. ಕೇಳಿದಾಗ ಹಿಂದಿರುಗಿಸಬೇಕೆಂಬ ಷರತ್ತಿನ ಮೇಲೆ ಬ್ಯಾಂಕು ಸ್ವೀಕರಿಸಿದ ಠೇವಣಿಗಳನ್ನು ಕೇವಲ ಸುರಕ್ಷಿತವಾಗಿ ಇಡುವುದಲ್ಲದೆ ಅಗತ್ಯ ಇರುವವರಿಗೆ ಆ ಮೊಬಲಗನ್ನು ಸಾಲವಾಗಿ ನೀಡಿ ಬಡ್ಡಿ ಸಂಪಾದನೆ ಮಾಡುವುದೇ ಪ್ರಧಾನವಾಗಿದ್ದ ಕಾಲದಲ್ಲಿ ಬ್ಯಾಂಕು ಈ ದೃಷ್ಟಿಯಿಂದಲೇ ತನ್ನ ಆಸ್ತಿಗಳನ್ನು—ನಿಧಿಗಳನ್ನು—ವ್ಯವಸ್ಥೆಗೊಳಿಸಬೇಕಾಗಿತ್ತು. ದ್ರವತ್ವ, ಭದ್ರತೆ, ಲಾಭಪ್ರದತೆ ಈ ಮೂರರ ನಡುವೆ ಯಾವ ರೀತಿಯ ಸಮತೋಲ ಸಾಧಿಸಬೇಕೆಂಬುದೇ ಬ್ಯಾಂಕರನ ಮಹಾ ಕಲೆಯಾಗಿತ್ತು. ಪರಸ್ಪರ ವಿರುದ್ಧವೆನಿಸಬಹುದಾದ ಈ ಉದ್ದೇಶಗಳನ್ನು ಸಮನ್ವಯಗೊಳಿಸುವುದು ಚಲನಶೀಲ ವ್ಯವಸ್ಥೆಯಲ್ಲಿ ಬ್ಯಾಂಕರನ ಸಾಮರ್ಥ್ಯಕ್ಕೊಂದು ಸವಾಲಾಗಿತ್ತು. ರಾಷ್ಟ್ರೀಕರಣದ ಅನಂತರ ಇದು ಸ್ವಲ್ಪ ಮಸುಕಾಗಿದೆಯೇನೋ ಎನಿಸುತ್ತದೆ. ವಾಣಿಜ್ಯ ಬ್ಯಾಂಕಿಂಗಿನ ಈ ಪ್ರಮುಖ ಕಾರ್ಯಭಾರದ ಜೊತೆಗೆ ಇನ್ನೊಂದು ಕಾರ್ಯಭಾರವನ್ನು—ಮಹಾ ಹೊಣೆಯನ್ನು—ಅದಕ್ಕೆ ಲಗತ್ತಿಸಲಾಗಿದೆ. ಅದು ಅಭಿವೃದ್ಧಿ ಸಾಧನೆ. ಇಂದು ನಮ್ಮ ಬ್ಯಾಂಕುಗಳು ವಾಣಿಜ್ಯ ಕಲಾಪಗಳನ್ನಷ್ಟೇ ಮಾಡುತ್ತಿಲ್ಲ. ಅಭಿವೃದ್ಧಿ ಬ್ಯಾಂಕಿಂಗ್ ಎಂಬ ಕಾರ್ಯಭಾರವೂ ಅವಕ್ಕೆ ಕೂಡಿಕೊಂಡಿದೆ. ಇದು ಪರಂಪರಾಗತ ಬ್ಯಾಂಕಿಂಗಿಗಿಂತ ತೀರ ಭಿನ್ನವಾದ್ದು. ಬ್ಯಾಂಕಿಗೆ ಲಾಭ ತಂದುಕೊಡುವುದರ, ತಾವೂ ಲಾಭ ಸಂಪಾದಿಸುವುದರ, ಉತ್ಪಾದಕವೆನಿಸುವ ಕಲಾಪಗಳಲ್ಲಿ ನಿರತರಾದ ಗ್ರಾಹಕರ ಅಗತ್ಯಗಳನ್ನು ಪೂರೈಸುವುದರ ಜೊತೆಗೆ, ಉತ್ಪಾದಕವೆನಿಸದ, ಸದ್ಯಕ್ಕೆ ಜಡವಾದ, ಆದರೆ ಅಗಾಧ ಭವಸಾಮರ್ಥ್ಯವುಳ್ಳ, ಅನಾರ್ಥಿಕವೂ ಅಸಹಾಯಕವೂ ನಿರಾಶಾಪೂರಿತವೂ ಆದ ವಲಯವೊಂದಕ್ಕೆ ಚೈತನ್ಯ ಮೂಡಿಸುವ-ಒಂದು ಬಗೆಯಲ್ಲಿ ಅಹಲ್ಯೋದ್ಧಾರ ಸದೃಶವಾದ-ಕಾರ್ಯಭಾರವನ್ನು ಅದು ನಿರ್ವಹಿಸಬೇಕಾಗಿದೆ. ಅಶಕ್ತರಿಗೆ ಆರ್ಥಿಕ ಶಕ್ತಿದಾನ, ಅವರಿಗೆ ಉತ್ಪಾದಕತೆಯ ಸಾಮರ್ಥ್ಯದ ನೀಡಿಕೆ, ಜೀವನಮಟ್ಟದ ಸುಧಾರಣೆ, ಅದರ ಜೊತೆಜೊತೆಗೇ—ಬಹುಶಃ ಅದಕ್ಕೂ ಮಿಗಿಲಾಗಿ—ಜೀವನದ ಗುಣದಲ್ಲೇ ಸುಧಾರಣೆ—ಇದೂ ಬ್ಯಾಂಕಿನ ಹೊಣೆ. ಗ್ರಾಮೀಣ ಆರ್ಥಿಕ ಅಭಿವೃದ್ಧಿ, ಕೊಳಚೆ ಪ್ರದೇಶದ ಸುಧಾರಣೆ ಮುಂತಾದ ಹಲವಾರು ಕಾರ್ಯಭಾರಗಳನ್ನು ಅದು ಹಮ್ಮಿಕೊಳ್ಳಬೇಕಾಗಿದೆ. ಜೊತೆಗೆ ವೈಜ್ಞಾನಿಕ ತಂತ್ರವಿದ್ಯಾತ್ಮಕ ವಿಕಾಸಕ್ಕೂ ಅದು ಪ್ರೋತ್ಸಾಹ ನೀಡಬೇಕಾಗಿದೆ. ಆರ್ಥಿಕ ಸ್ವಾವಲಂಬನೆಗೆ ಇದು ಅತ್ಯಾವಶ್ಯಕ. ಒಟ್ಟಿನಲ್ಲಿ ಬ್ಯಾಂಕುಗಳು ಪರಿವರ್ತನೆಯ ಹರಿಕಾರರಂತಾಗಬೇಕಾಗಿದೆ, ಬದಲಾವಣೆಯ ಸಾಧನಗಳಾಗಿ ಕಾರ್ಯನಿರ್ವಹಿಸಬೇಕಾಗಿದೆ, ಬೆಳವಣಿಗೆಯ ಹಾಗೂ ಅಭಿವೃದ್ಧಿಯ ವೇಗವರ್ಧಕಗಳ ಪಾತ್ರವನ್ನೂ ವಹಿಸಬೇಕಾಗಿದೆ. ಅವು ಅಭಿವೃದ್ಧಿ ಆಡಳಿತಗಾರರ ಕೆಲಸ ಮಾಡುತ್ತಿವೆ. ಆರ್ಥಿಕ ಪರಿವರ್ತನೆಯ ಸಾಧನಗಳಾಗಿರುವ ಬ್ಯಾಂಕುಗಳಿಗೆ ಲಾಭವೇ ಮುಖ್ಯವಲ್ಲ ಎಂಬುದು ನಿಜ. ಆದರೆ ಲಾಭದೃಷ್ಟಿ ಮರೆಯಾಗತಕ್ಕದ್ದಲ್ಲ. ವ್ಯವಹಾರದಲ್ಲಿ ಉಳಿದು ಬೆಳೆಯಲು ಅಗತ್ಯವಾದಷ್ಟು ಲಾಭವನ್ನಂತೂ ಅವು ಗಳಿಸಲೇಬೇಕು ಎಂಬುದು ನಿರ್ವಿವಾದ. ಸಹಜವಾಗಿಯೇ ಈ ಪಾತ್ರನಿರ್ವಹಣೆಯಲ್ಲಿ ಅವು ಹಲವಾರು ಸವಾಲುಗಳನ್ನೆದುರಿಸಬೇಕಾಗಿದೆ. ವ್ಯವಸ್ಥಾಪನಾತ್ಮಕ ಹಾಗೂ ಸಂರಚನಾತ್ಮಕ ಸವಾಲುಗಳು ಒಂದು ಬಗೆಯಾದರೆ, ನಿರ್ವಹಣೆಯ, ಪರಿಚಾಲನೆಯ ವೆಚ್ಚಗಳನ್ನು ತಗ್ಗಿಸುವುದು ಇನ್ನೊಂದು ಬಗೆಯ ಸವಾಲು. ಉತ್ಪಾದಕತೆ ಹಾಗೂ ಲಾಭಪ್ರದತೆಯನ್ನು ಹೆಚ್ಚಿಸುವತ್ತಲೂ ಬ್ಯಾಂಕುಗಳು ಗಮನ ಹರಿಸಬೇಕಾಗಿದೆ. ತಾಂತ್ರಿಕ ಹಾಗೂ ಇತರ ಬಗೆಯ ಪ್ರವೀಣರನ್ನು ಹೆಚ್ಚಿನ ಸಂಖ್ಯೆಯಲ್ಲಿ ಬ್ಯಾಂಕುಗಳು ನೇಮಿಸಿಕೊಳ್ಳಬೇಕಾಗಿ ಬರಬಹುದು. ಇದು ತನ್ನದೇ ಆದ ಸವಾಲುಗಳನ್ನೊಡ್ಡುತ್ತದೆ.

## ಹೊಸ ಬಗೆಯ ಗ್ರಾಹಕರು

ಕಳೆದ ಇಪ್ಪತ್ತು ವರ್ಷಗಳಲ್ಲಿ ಬ್ಯಾಂಕುಗಳು ನಡೆದು ಬಂದ ಹಾದಿಯನ್ನು ಗಮನಿಸಿದಾಗ, ಅನೇಕ ಹೊಸ ಬಗೆಯ ಗ್ರಾಹಕರು ಹುಟ್ಟಿಕೊಂಡಿರುವುದನ್ನು ಕಾಣಬಹುದು. ಆದ್ಯತಾ ವಲಯದ ಗ್ರಾಹಕರದು ಒಂದು ಬಗೆ. ಹೆಚ್ಚಿನ ಪ್ರಾಮುಖ್ಯ ಗಳಿಸುತ್ತಿರುವ ಗ್ರಾಹಕವರ್ಗವೆಂದರೆ ಸರ್ಕಾರಿ ವಲಯದ ಉದ್ಯಮಗಳದು. ಸರ್ಕಾರಿ ವಲಯದ ಉದ್ಯಮಗಳನ್ನು ಕಡೆಗಣಿಸುವಂತಿಲ್ಲ. ಆದರೆ ಖಾಸಗಿ ವಲಯದ ಉದ್ಯಮಗಳಿಗೂ ಇವಕ್ಕೂ ಬಹಳ ವ್ಯತ್ಯಾಸವಿರುವುದನ್ನು ಬ್ಯಾಂಕುಗಳು ಗಮನಿಸಬೇಕು. ಎರಡೂ ಒಂದೇ ಎಂದು ಬ್ಯಾಂಕುಗಳು ಬಗೆಯುವಂತಿಲ್ಲ. ತಂತ್ರವ್ಯೂಹ, ನಿಯಂತ್ರಣಕ್ರಮ, ಮಾನಗಳು (norms) ಎಲ್ಲ ದೃಷ್ಟಿಯಿಂದಲೂ ಅವು ಭಿನ್ನ. ಈ ಶತಮಾನದ ಅಂತ್ಯದ ವೇಳೆಗೆ—ಸರ್ಕಾರಿ ಕಂಪನಿಗಳ ಖಾಸಗೀಕರಣದ ಮಾತು ಬಹಳಷ್ಟು ಕೇಳಿಬರುತ್ತಿದ್ದರೂ—ಸರ್ಕಾರಿ ವಲಯ ಬಹಳಷ್ಟು ಬೆಳೆದೇ ಇರುತ್ತದೆ ಎಂಬುದನ್ನು ಮರೆಯಬಾರದು. ರಾಜ್ಯ

ಹಾಗೂ ಕೇಂದ್ರ ಸರ್ಕಾರಿ ಅಭಿಕರಣಗಳೊಂದಿಗೆ—ಬ್ಲಾಕ್, ಜಿಲ್ಲಾ, ರಾಜ್ಯ ಹಾಗೂ ಕೇಂದ್ರ ಮಟ್ಟಗಳಲ್ಲಿ—ವ್ಯವಹರಿಸಲು ಬ್ಯಾಂಕುಗಳು ವಿಶಿಷ್ಟವಾದ ವಿಧಿ, ವಿಧಾನ, ವ್ಯವಸ್ಥೆ, ಕೌಶಲಗಳನ್ನೇ ಬೆಳೆಸಿಕೊಳ್ಳಬೇಕಾಗುತ್ತದೆ. ಇದೂ ಒಂದು ಭಾರಿ ಸವಾಲು. ಈ ಶತಮಾನದ ಅಂತ್ಯದ ವೇಳೆಗೆ ಇನ್ನೂ ಹಲವಾರು ವಲಯಗಳು ಉದ್ಭವವಾಗಿರುತ್ತವೆ. ಹತ್ತು ವರ್ಷ ಹಿಂದೆ ನಾವು ಊಹಿಸಿ ಕೂಡ ಇರದಿದ್ದ ಹಲವು ವಲಯಗಳೂ ಕಲಾಪಗಳೂ ಇಂದು ಮೈತಳೆದಿವೆ. ಇನ್ನು ಹತ್ತು ವರ್ಷಕ್ಕೆ ಬೇರೆ ಯಾವುವು ಹುಟ್ಟಿಕೊಳ್ಳುತ್ತವೆ ಎಂಬುದನ್ನು ಇಂದು ಯಾರೂ ಊಹಿಸಲಾರರು. ಈ ಅನೂಹ್ಯ ಪ್ರಪಂಚದಲ್ಲಿ ದೃಢವಾಗಿ ಹೆಜ್ಜೆ ಇಟ್ಟು ಮುನ್ನಡೆಯಲು ಬ್ಯಾಂಕುಗಳು ಈಗಿಂದೀಗಲೇ ತಯಾರಾಗಬೇಕು. ಕಪ್ಪನೆಯ ಕತ್ತಲಲ್ಲಿ ಕಣ್ಣಿಗೆ ಕಪ್ಪುಪಟ್ಟಿ ಕಟ್ಟಿಕೊಂಡು, ಎದುರಾಗಬಹುದಾದ ಕಪ್ಪನೆಯ ವಿಚಿತ್ರ ಪ್ರಾಣಿಯನ್ನು ಎದುರಿಸಬೇಕಾಗುವಂಥ ಪರಿಸ್ಥಿತಿಯಿದು.

ಈ ಅಗತ್ಯದ ಪೂರೈಕೆಗಾಗಿ, ಬ್ಯಾಂಕಿನ ಬಗ್ಗೆ ಜನಸಮುದಾಯ ಹಾಗೂ ಆಡಳಿತವರ್ಗ ತಳೆದಿರುವ ನಿರೀಕ್ಷೆಗಳನ್ನು ಸಾರ್ಥಕಗೊಳಿಸಲು, ಉದ್ಯಮ ಹಾಗೂ ಸಾಂಸ್ಥಿಕ ಮಟ್ಟದಲ್ಲಿ ಹಲವಾರು ಸಂರಚನಾತ್ಮಕ ಹಾಗೂ ವ್ಯವಸ್ಥಾಪಕನಾತ್ಮಕ ನವೋನ್ಮೇಷಗಳು ಅಗತ್ಯವಾಗುತ್ತವೆ. ವ್ಯವಸ್ಥಾಪನ ವ್ಯವಸ್ಥೆಯಲ್ಲಿ ಹಲವಾರು ಘಟಕಗಳ ನಿರ್ಮಾಣ ಅಗತ್ಯವಾಗುತ್ತದೆ. ಅಧಿಕಾರದ ನಿಯೋಜನೆ, ನಿಯಂತ್ರಣದ ವಿಧಾನಗಳು ಮುಂತಾದವನ್ನೆಲ್ಲ ರೂಪಿಸಬೇಕಾಗುತ್ತದೆ. ಸಂಘಟನೆಯ ನಾನಾ ಸ್ತರಗಳ ನಡುವೆ ಎಂಥ ಸಂಬಂಧ ಇರಬೇಕು ಎಂಬುದರ ಸ್ಪಷ್ಟ ಪರಿಜ್ಞಾನ ಇರುವುದು ಅಗತ್ಯ.

## ಪರಂಪರಾಗತ ಗ್ರಾಹಕ ವರ್ಗ

ಅಭಿವೃದ್ಧಿ ಬ್ಯಾಂಕಿಂಗ್ ಕಾರ್ಯಭಾರ ನಿರ್ವಹಣೆಗಾಗಿ ಅಧಿಕಾಧಿಕ ನಿಧಿಗಳು ಅಗತ್ಯವಾಗುವುದರಿಂದ ಪರಂಪರಾಗತ ಗ್ರಾಹಕ ವರ್ಗಕ್ಕೆ ಲಭ್ಯವಿರುವ ಸಂಪನ್ಮೂಲಗಳು ವಿರಳವಾಗುತ್ತವೆ. ಆದರೆ ಬ್ಯಾಂಕಿಗೆ ಲಾಭ ತರುವ ವಿಭಾಗವೇ ಇದು. ಇದರಿಂದಲೇ ಬ್ಯಾಂಕು ಮೈತುಂಬಿಕೊಂಡು ಬೆಳೆಯಬೇಕು. ಬ್ಯಾಂಕುಗಳ ನಡುವೆ ಸ್ಪರ್ಧೆ ಬೆಳೆಯುತ್ತಿರುವುದು ಈ ಗ್ರಾಹಕ ವರ್ಗಕ್ಕಾಗಿಯೇ. ಈ ವಿಭಾಗದ ದಕ್ಷ ನಿರ್ವಹಣೆಯೇ ಬ್ಯಾಂಕಿಂಗ್ ಉದ್ಯಮದ ಉತ್ಪಾದಕತೆಗೆ ಆಧಾರ. ಇದು ಆಧುನಿಕ ಬ್ಯಾಂಕಿಂಗ್ ವಿಭಾಗ. ವಿದ್ಯುನ್ಮಾನ ಬ್ಯಾಂಕಿಂಗ್, ಕ್ಷಿಪ್ರಗತಿ ವ್ಯವಸ್ಥೆ, ಆಧುನಿಕ ಸಲಕರಣೆಗಳು—ಎಲ್ಲವೂ ಈ ವರ್ಗದ ಸಂಪ್ರೀತಿಗಾಗಿ. ಹೆಚ್ಚು ದಕ್ಷವಾದ, ಹೆಚ್ಚು ಕ್ಷಿಪ್ರವಾದ ಸೇವೆ ಸಲ್ಲಿಸಲು ಮಾತ್ರವೇ ಅಲ್ಲದೆ ಬೆಳೆಯುತ್ತಿರುವ ವ್ಯವಹಾರವನ್ನು ನಿರ್ವಹಿಸಲೂ, ಹೊಸ ಹೊಸ ಗ್ರಾಹಕರನ್ನು ಆಕರ್ಷಿಸಲೂ ಇವು ಅಗತ್ಯವಾಗುತ್ತವೆ. ವ್ಯವಸ್ಥಾಪನ ಮಾಹಿತಿವ್ಯವಸ್ಥೆ, ದೂರ ಸಂಪರ್ಕ, ಗಣಕೀಕರಣ ಎಲ್ಲವೂ ಪ್ರಾಮುಖ್ಯ ತಳೆಯುತ್ತವೆ.

## ಜಾಲದ ಸಮಸ್ಯೆ

ಆದ್ಯತಾ ವಲಯಕ್ಕೆ ಸಾಲ ನೀಡಿಕೆ ಸೇವಾಕ್ಷೇತ್ರ ಅಭಿಗಮನ ಮುಂತಾದ ಕಲಾಪಗಳು ಬೆಳೆದಂತೆ ಬ್ಯಾಂಕುಗಳು ದೇಶದ ಮೂಲೆಮೂಲೆಗೂ ತಮ್ಮ ಜಾಲವನ್ನು ಹಬ್ಬಿಸುತ್ತವೆ. ನಿಯಂತ್ರಣ ಸಮಸ್ಯೆ ದೈತ್ಯಾಕಾರ ತಳೆಯುತ್ತದೆ. ಗುಣಮಟ್ಟ ಇಳಿಯುವುದು ಸಹಜ. ವಿಶೇಷ ಪರಿಣತರ ಅಗತ್ಯ ಹೆಚ್ಚುತ್ತದೆ. ಮಾರ್ಗದರ್ಶನ, ಪ್ರವರ್ತನೆ, ನಿಯಂತ್ರಣ ಈ ಕಾರ್ಯಗಳನ್ನು ನಿರ್ವಹಿಸಲು ಅಗತ್ಯವಾದ ಸಂಘಟನಾತ್ಮಕ ಸಂರಚನೆ—ಪ್ರಾದೇಶಿಕ ಹಾಗೂ ಇತರ ಹಂತಗಳಲ್ಲಿ—ಲಭ್ಯವಿರುವುದಿಲ್ಲ. ಈ ಸಮಸ್ಯೆಯ ಪರಿಹಾರ ಸುಲಭವಲ್ಲ.

## ಸಿಬ್ಬಂದಿ

ಸಿಬ್ಬಂದಿಯದೊಂದು ದೊಡ್ಡ ಸಮಸ್ಯೆ. ಬ್ಯಾಂಕುಗಳಿಗೆ ಸೇರುವ ಉದ್ಯೋಗಿಗಳ ಸಂಖ್ಯೆ ಅಗಾಧ. ತಳ ವಿಸ್ತರಿಸುತ್ತದೆ. ಆದರೆ ಮೇಲಣ ಸ್ತರಗಳಿಗೆ ಬಡ್ತಿಯ ಅವಕಾಶಗಳು ಅದೇ ದರದಲ್ಲಿ ಬೆಳೆಯುವುದಿಲ್ಲ. ಇದು ಹತಾಶೆಗೆ ಕಾರಣವಾಗುತ್ತದೆ. ಬ್ಯಾಂಕಿಂಗ್ ವ್ಯವಹಾರದ ಸ್ವರೂಪದ ಕಲ್ಪನೆಯೂ ಇಲ್ಲದ ಸಿಬ್ಬಂದಿ ನಾನಾ ಬಗೆಯ (ರಾಜಕೀಯ ಹಾಗೂ ಇತರ) ಒತ್ತಡಗಳನ್ನೆದುರಿಸಬೇಕಾಗುತ್ತದೆ. ವರ್ತನಾತ್ಮಕ (behavioural) ಪರಿಹಾರೋಪಾಯಗಳತ್ತ ಬ್ಯಾಂಕುಗಳು ದೃಷ್ಟಿ ಹರಿಸುವುದು ಅಗತ್ಯವೆನಿಸೀತು. ತರಬೇತಿ, ವ್ಯವಸ್ಥಾಪನ ವಿಕಾಸ, ಯಥೋಚಿತ ಮಾನವಶಕ್ತಿ ಯೋಜನೆ ಎಲ್ಲವೂ ಪ್ರಾಮುಖ್ಯ ಗಳಿಸುತ್ತವೆ. ಸರಿಯಾದ ಮನೋಧರ್ಮವುಳ್ಳವರ ಆಯ್ಕೆ ಮತ್ತು ನೇಮಕಕ್ಕೆ ಹೆಚ್ಚಿನ ಗಮನ ಸಲ್ಲುವುದು ಅಗತ್ಯ. ಪರೀಕ್ಷಾ ವಿಧಾನವೇ ಮೂಲಭೂತವಾಗಿ ಬದಲಾಗಬೇಕು. ಸೇವಾಕ್ಷೇತ್ರ ಯೋಜನೆ ಯಶಸ್ವಿಯಾಗಲು ಬೇಕಾಗುವ ಸಾಮರ್ಥ್ಯ, ಮನೋಧರ್ಮ ಅಗಾಧ.

ಸಂಶೋಧನೆಗೂ ಹೆಚ್ಚಿನ ಗಮನ ಸಲ್ಲಬೇಕು. ಪರಿಸರದ ಸ್ಪಷ್ಟ ಜ್ಞಾನ, ಸಮಸ್ಯೆಯ ಸ್ವರೂಪದ ಅರಿವು ಇವೆಲ್ಲ ಬೆಳೆದಾಗ ಸಂಘಟನಾತ್ಮಕ ನವೀಕರಣಕ್ಕಾಗಿ ಹೊಸಹೊಸ ಉಪಾಯಗಳು ತಾವಾಗಿಯೇ ಹೊಳೆಯುತ್ತವೆ. ಶಾಖಾಮಟ್ಟದಲ್ಲಿ ಸೇವೆಯ ವೆಚ್ಚದ ನಿರ್ಣಯಕ್ಕೆ ಹೆಚ್ಚಿನ ಒತ್ತು ಕೊಡಬೇಕಾಗುತ್ತದೆ.

## ಆಕ್ರಮಣಶೀಲ ಬ್ಯಾಂಕಿಂಗ್

ಬ್ಯಾಂಕುಗಳು ಒಂದು ಕಾಲದಲ್ಲಿ ಸಂಪ್ರದಾಯದ ಭದ್ರ ಕೋಟೆಗಳಾಗಿದ್ದುವು. ಅವುಗಳಲ್ಲಿ ವಿಶೇಷೀಕರಣ ಪ್ರಧಾನವಾಗಿತ್ತು. ಅವುಗಳ ನಡುವೆ ವಾಣಿಜ್ಯ ಬ್ಯಾಂಕಿಂಗ್ ಮುಂತಾಗಿ ಕಟ್ಟುನಿಟ್ಟಾದ ವಿಭಜನೆಯಿತ್ತು. ಈಗ ಈ ನಡುಗೋಡೆಗಳು ಉರುಳುತ್ತಿವೆ. ಸಂಪ್ರದಾಯಜಡತೆ, ಪರಂಪರಾಗತ ವಿಧಾನಗಳಿಗೆ ಮಾನ್ಯತೆ—ಇವು ಹೋಗುತ್ತಿವೆ. ಬ್ಯಾಂಕುಗಳ ಹೆಚ್ಚು ಹೆಚ್ಚು ಆಕ್ರಮಣಶೀಲವೂ ಚೈತನ್ಯಪೂರಿತವೂ ಆಗುತ್ತಿವೆ. ಉಳಿತಾಯದಾರರ, ವಿನಿಯೋಜನದಾರರ ಹಣದ ಮೇಲೆ ಅವುಗಳ ಕಣ್ಣು ಬಿದ್ದಿದೆ. ಇದಕ್ಕಾಗಿ ಅವವುಗಳಲ್ಲೇ ಸ್ಪರ್ಧೆ ತೀವ್ರವಾಗಿದೆ. ಇದುವರೆಗೆ ಗುರುತಿಸದಿದ್ದ, ಪರಿಚಯವಿಲ್ಲದ ಸೀಮೆಗಳಿಗೆ ಅವು ಪ್ರವೇಶ ಮಾಡುತ್ತಿವೆ. ಬಳಕೆದಾರ ಉದರಿ, (consumer credit) ಪ್ರವರ್ತನ ಬಂಡವಾಳ(venture capital), ಗುತ್ತಿಗೆ ವ್ಯವಹಾರ (leasing), ಗೃಹನಿರ್ಮಾಣ ಮುಂತಾದ ಕ್ಷೇತ್ರಗಳಲ್ಲಿ ಅವು ಕಾರ್ಯನಿರ್ವಹಿಸತೊಡಗಿವೆ. ಇಪ್ಪತ್ತೊಂದನೆಯ ಶತಮಾನಕ್ಕೆ ಧಾವಿಸುವಾಗ ಬ್ಯಾಂಕುಗಳ ಹಣಕಾಸಿನ ಮೇರೆಗಳೇ ಬಹಳಷ್ಟು ಬದಲಾಗಿರುತ್ತವೆ. ಯಕ್ಷಿಣೀ ದಂಡವನ್ನು ಪ್ರಯೋಗಿಸಿದಂತೆ ಬ್ಯಾಂಕಿಂಗ್ ವಲಯದ ಸ್ವರೂಪದಲ್ಲೇ ಮಹಾ ಪರಿವರ್ತನೆಯಾಗಿರುತ್ತದೆ. ಬಂಡವಾಳ ಮಾರುಕಟ್ಟೆಯ ಪ್ರಾಮುಖ್ಯ, ಖಾಸಗಿ ಹಣಕಾಸು ಸಂಸ್ಥೆಗಳ ಬೆಳವಣಿಗೆ—ಇವೆಲ್ಲವನ್ನೂ ಅವು ಎದುರಿಸಬೇಕಾಗುತ್ತದೆ.

ಸುಮಾರು ಎರಡು ದಶಕಗಳ ಇತಿಹಾಸವುಳ್ಳ ಉದರಿ ಕಾರ್ಡ್ ವ್ಯವಹಾರ ಭಾರತದಲ್ಲೂ ಬ್ಯಾಂಕುಗಳ ಕಣ್ಣು ಕೋರೈಸತೊಡಗಿದೆ. ಅನೇಕ ಬ್ಯಾಂಕುಗಳು ಇದರಲ್ಲಿ ತೊಡಗಿವೆ. ಇದರ ಸಾಧ್ಯತೆಗಳ ವೈಜ್ಞಾನಿಕ ವಿವೇಚನೆಯನ್ನೂ ಆಗಿಲ್ಲ. ಸ್ವಯಂಚಲೀ ಪರಾಫ್ ಯಂತ್ರದ ಫ್ಯಾಶನ್ ಬೆಳೆಯುತ್ತಿದೆ. ಬಳಕೆದಾರ ಉದರಿಯೇನೂ ಬ್ಯಾಂಕುಗಳಿಗೆ ಇಂದು ನಿಷಿದ್ಧವಲ್ಲ. ಭಾರತೀಯ ಸ್ಟೇಟ್ ಬ್ಯಾಂಕಿನ ಬೃಹತ್ ಖರೀದಿ ಯೋಜನೆ ಇದಕ್ಕೆ ನಿದರ್ಶನ. ಪರಸ್ಪರ ನಿಧಿ ಸ್ಥಾಪಿಸಲು ಬ್ಯಾಂಕುಗಳು ಹಾತೊರೆಯುತ್ತಿವೆ. ಉಪಕ್ರಮ ಬಂಡವಾಳ ಅನೇಕ ಹಾನಿ ಭಯಗಳಿಂದ ಕೂಡಿದ್ದು. ಆದರೆ ಬ್ಯಾಂಕುಗಳು ಈ ಕ್ಷೇತ್ರದಲ್ಲಿ ದಾಪುಗಾಲು ಇಡತೊಡಗಿವೆ. ಇದಕ್ಕಾಗಿ ಸಹಾಯಕ ಸಂಸ್ಥೆಗಳನ್ನು ಸ್ಥಾಪಿಸುತ್ತಿವೆ. ಸಾಂಸ್ಥಿಕ ಗ್ರಾಹಕರಿಗೆ ಅಲ್ಪಾವಧಿಯ ಉದರಿ ನೀಡುವಲ್ಲಿ ಹೊಸ ಹೊಸ ಪ್ರಯೋಗಗಳಾಗುತ್ತಿವೆ. 180 ದಿನಗಳ ವಾಣಿಜ್ಯ ಪತ್ರ ನೀಡಿಕೆಯ ಸಲಹೆ ಇಂಥದು. ಬ್ಯಾಂಕುಗಳ ಧೋರಣೆಯೇ ಬದಲಾಗುತ್ತಿದೆ. ಸರ್ಕಾರಿ ಹಾಗೂ ಇತರ ವಲಯಗಳ ಸಂಸ್ಥೆಗಳು ನೇರವಾಗಿ ತಮಗೆ ಬೇಕಾದ ಹಣ ಎತ್ತತೊಡಗಿರುವುದರಿಂದ ಬ್ಯಾಂಕುಗಳು ಉಳಿತಾಯದಾರರ ಹಾಗೂ ವಿನಿಯೋಜನದಾರರ ನಡುವಣ ಕೊಂಡಿಯಾಗಿರುವ ಪಾತ್ರ—ಮಧ್ಯವರ್ತಿಯ ಕಾರ್ಯಭಾರ—ಕರಗುತ್ತಿದೆ. ಆದ್ದರಿಂದಲೇ ಈ ಎಲ್ಲ ಹೊಸ ಹೊಸ ಪ್ರಯೋಗ.

### ಠೇವಣಿ

ಅಭಿವೃದ್ಧಿ ಪ್ರಯತ್ನದಲ್ಲಿ ಮಹತ್ತರ ಪಾತ್ರ ವಹಿಸಬೇಕಾಗಿ ಬಂದಿರುವ ಭಾರತೀಯ ಬ್ಯಾಂಕುಗಳು ಇದರಿಂದಾಗಿ ಹೊಸ ಪರಿಸ್ಥಿತಿಯನ್ನೆದುರಿಸುತ್ತಿವೆ. ಅಭಿವೃದ್ಧಿಗೆ ಸಂಬಂಧಿಸಿದಂತೆ ಬಂಡವಾಳ ವಿರಳವೆನಿಸುತ್ತಿದೆ. ಸಂಪನ್ಮೂಲಗಳನ್ನು ಕ್ರೋಡೀಕರಿಸಿ, ಇಚ್ಛಿತ ದಿಕ್ಕುಗಳಲ್ಲಿ ಅವನ್ನು ಹರಿಯಿಸಬೇಕಾಗಿರುವ ಬ್ಯಾಂಕುಗಳು ಠೇವಣಿಗಳಿಗೆ ಹೆಚ್ಚಿನ ಗಮನ ಹರಿಸಬೇಕಾಗಿದೆ. ಅವು ಪರಂಪರಾಗತ ಸ್ಥಿರ ಠೇವಣಿಗಳನ್ನು ಪುನರ್ವಿನ್ಯಾಸಗೊಳಿಸುತ್ತಿವೆ. ಸಾಲ ಜೋಡಣೆಯ ಠೇವಣಿ, ಅಸ್ಥಿರವಾದ ಸ್ಥಿರಠೇವಣಿ (ಸ್ಥಿರಠೇವಣಿ ಆಧಾರದ ಮೀರೆಳೆತ), ಪ್ರವಾಸಿ ಚೆಕ್ಕುಗಳ ಹಣದ ಮೇಲೆ ಬಡ್ಡಿ ನೀಡಿಕೆ ಮುಂತಾದ ಪ್ರಯೋಗಗಳು ನಡೆದಿವೆ. ಠೇವಣಿಗಾಗಿ ನಡೆದಿರುವ ಸ್ಪರ್ಧೆ ಬಲು ತೀವ್ರ. ವಿವಿಧ ಬಗೆಯ ಠೇವಣಿಗಳ ಬದಲು, ಬೇರೆಬೇರೆ ದಿನಾಂಕಗಳಂದು ಪಕ್ವಗೊಳ್ಳುವ ಠೇವಣಿಗಳ ಬದಲು, ಚಾಲ್ತಿ, ಉಳಿತಾಯ ಹಾಗೂ ನಿರಖು ಠೇವಣಿಗಳ ಉದ್ದೇಶಗಳನ್ನೆಲ್ಲ ಪೂರೈಸಬಲ್ಲ ಒಂದೇ ಬಗೆಯ ಠೇವಣಿ ಖಾತೆಯನ್ನು ರೂಪಿಸುವತ್ತ ವಿಚಾರ ಹರಿಯುತ್ತಿದೆ. ಠೇವಣಿ ಖಾತೆಯಲ್ಲಿ ಹಣದ ಶಿಲ್ಕು ಎಷ್ಟು ದೀರ್ಘಕಾಲ ಇರುತ್ತದೋ ಅದಕ್ಕನುಗುಣವಾದ ದರದಲ್ಲಿ ಬಡ್ಡಿ ನೀಡುವುದೊಂದು ಕ್ರಾಂತಿಕಾರಿ ಯೋಜನೆ. ಈ ಶತಮಾನದ ಅಂತ್ಯದ ವೇಳೆಗೆ ಇಂಥವೆಲ್ಲ ನನಸಾಗಬಹುದು.

### ಭಾಷಾನುಗುಣ ವಿಕೇಂದ್ರೀಕರಣ

ಬ್ಯಾಂಕುಗಳ ಸಂರಚನೆಯನ್ನು ಪುನಃ ರೂಪಿಸುವುದಕ್ಕೂ ಗಮನ ಹರಿಸಬೇಕಾಗುತ್ತದೆ. ಹಲವು ಬ್ಯಾಂಕುಗಳು ದೇಶಾದ್ಯಂತ ಜಾಲ ಹಬ್ಬಿಸುವ ಬದಲು ಅವನ್ನು ವಿಕೇಂದ್ರೀಕರಿಸಬಹುದೆ? ಪ್ರಾದೇಶಿಕವಾಗಿ ಒಡೆಯಬಹುದೆ? ಕಾರ್ಯ ಭಾಷಾನುಗುಣವಾಗಿ ಅವನ್ನು ಪುನರ್ವ್ಯವಸ್ಥೆಗೊಳಿಸಬಹುದೆ? ಪ್ರಾದೇಶಿಕ ಭಾಷೆಗಳಿಗೆ ಪ್ರಾಮುಖ್ಯ ನೀಡಬೇಡವೆ? ಇವೆಲ್ಲ ಪ್ರಮುಖ ಪ್ರಶ್ನೆಗಳೇ.

### ಯಕ್ಷಪ್ರಶ್ನೆ

ಬ್ಯಾಂಕು ಸಾಲಗಳ ಮರುಪಾವತಿಯ ಅಸಮರ್ಪಕತೆ, ಅಸ್ವಸ್ಥ ಉದ್ಯಮ ಘಟಕಗಳು—ಇವೆಲ್ಲ ಮುಂದಿನ ಶತಮಾನದ ವೇಳೆಗೆ ಪ್ರಮುಖ ಸಮಸ್ಯೆಗಳಾಗುತ್ತವೆ. ಈ ಸವಾಲುಗಳನ್ನೆದುರಿಸಲು ಬ್ಯಾಂಕು ತೊಡಗಬೇಕಾಗುತ್ತದೆ. ವಿನಿಯೋಜನೆ, ದ್ರವತ್ವ ಅನುಪಾತ, ಸರ್ಕಾರಿ ವ್ಯವಹಾರ, ಬ್ಯಾಂಕುಗಳ ಸ್ವಾಯತ್ತತೆ ಹಾಗೂ ಹೊಣೆಗಾರಿಕೆ—ಇವುಗಳಿಗೂ ಗಮನಹರಿಸುವುದು ಅಗತ್ಯ. ಬರಲಿರುವ ಶತಮಾನವನ್ನು ದಿಟ್ಟತನದಿಂದ ಎದುರಿಸಲು ಬ್ಯಾಂಕುಗಳು ಎಷ್ಟರಮಟ್ಟಿಗೆ ಸಿದ್ಧವಾಗುತ್ತಿವೆ? ಅವಕ್ಕೆ ಈ ಸ್ವಾತಂತ್ರ್ಯ ನೀಡಲು ಸರ್ಕಾರ ಎಷ್ಟರ ಮಟ್ಟಿಗೆ ಸಿದ್ಧವಾಗಿದೆ? ಇದು ಯಕ್ಷಪ್ರಶ್ನೆ. ★

---

## 'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರು

(ಡಿಸೆಂಬರ್ ಸಂಚಿಕೆಯಿಂದ ಮುಂದುವರಿದ ಪಟ್ಟಿ)

### ಶ್ರೀ/ಶ್ರೀಮತಿ

೬೬೧ ಶ್ರೀರಂಗರಾಜನ್
೬೬೨ ಕೆ. ಎಸ್. ನೀಲಕಂಠಬಾಬು
೬೬೩ ಟಿ. ಎಸ್. ವಿನಯ
೬೬೪ ನಾ. ಶ್ರೀಧರ
೬೬೫ ಅಮುಲ್ ಕುಮಾರ್
೬೬೬ ಎಂ. ನಿಜಲಿಂಗಪ್ಪ
೬೬೭ ಕೆ. ಡಿ. ಜೋಷಿ
೬೬೮ ವಿ. ಕೆ. ಹೆಗ್ಡೆ
೬೬೯ ಎಂ. ಜೆ. ಕಾರಂತ್
೬೭೦ ಕೆ. ಐ. ವೈದ್ಯ
೬೭೧ ಎಂ. ಬಸವರಾಜ್
೬೭೨ ಕುಲಕರ್ಣಿ ಶ್ರೀಧರ
೬೭೩ ರವಿಕುಮಾರ್ ಕಿರ್ಜಗಿ
೬೭೪ ಆರ್. ಡಿ. ಪಾಟೀಲ್
೬೭೫ ರವಿರಾಜ್ ಇಡ್ಯ
೬೭೬ ವೈ. ಆರ್. ಶಹಪುರ್
೬೭೭ ಎಲ್. ಡಿ. ಕೆರೂರ್
೬೭೮ ತರುಣ್ ಟಿ. ಎಸ್. ಷೈಡೆ
೬೭೯ ಕೋ. ಸು. ವೆಂಕಟೇಶರಾವ್
೬೮೦ ಚ. ರಂ. ಸುದರ್ಶನ್
೬೮೧ ಎನ್. ಮುನಿಸ್ವಾಮಿಗೌಡ
೬೮೨ ಟಿ. ಎಸ್. ಶಶಿಧರ
೬೮೩ ಹಾ. ನಾ. ಗೋಪಾಲಕೃಷ್ಣ
೬೮೪ ಜೆ. ಕೆ. ಸದಾಶಿವ
೬೮೫ ಎಸ್. ಗುರುರಾಜ್
೬೮೬ ಸುಭಾಷ್ ರೆಡ್ಡಿ
೬೮೭ ರಂಗರಾಜನ್
೬೮೮ ಪಿ. ವಿ. ಮಯ್ಯ

**ಸಹಕಾರಿ ತರಬೇತಿ ಕೇಂದ್ರಗಳು**

೬೮೯ ಬೆಂಗಳೂರು
೬೯೦ ಮೈಸೂರು
೬೯೧ ಶಿವಮೊಗ್ಗ
೬೯೨ ಮೂಡುಬಿದ್ರೆ
೬೯೩ ಧಾರವಾಡ
೬೯೪ ಮಡಿಕೇರಿ
೬೯೫ ಗುಲ್ಬರ್ಗಾ

**ಭಾರತೀಯ ಸ್ಟೇಟ್ ಬ್ಯಾಂಕಿನ ಈ ಮುಂದಿನ ಶಾಖೆಗಳು :**

೬೯೬ ಖಾನಾಪುರ
೬೯೭ ಲಖನ್‌ಗಾಂವ್
೬೯೮ ಸಾಣೆಗುರುವನಹಳ್ಳಿ
೬೯೯ ಗೋಕಾಕ
೭೦೦ ಐ.ಎಸ್.ಆರ್.ಒ. ಬೆಂಗಳೂರು
೭೦೧ ಬಸರಕೋಡ
೭೦೨ ತಂಬ್ರಹಳ್ಳಿ
೭೦೩ ರಾಣಿ ಚೆನ್ನಮ್ಮನಗರ
೭೦೪ ಬೆಳಗಾಂ ಬಜಾರ್
೭೦೫ ಅಂಕೋಲ
೭೦೬ ಬಾಶೆಟ್ಟಿಹಳ್ಳಿ ಕೈಗಾರಿಕಾ ವಸಾಹತು (ದೊಡ್ಡಬಳ್ಳಾಪುರ)
೭೦೭ ಮಾಗಡಿ ರಸ್ತೆ
೭೦೮ ಅಗ್ರ ಬ್ಯಾಂಕ್ ಕಛೇರಿ (ಬಿದರೆ)
೭೦೯ ಸಂತಪುರ ಕೃಷಿ ಅಭಿವೃದ್ಧಿ ಶಾಖೆ
೭೧೦ ಭಾಲ್ಕಿ
೭೧೧ ಹುಲಸೂರು
೭೧೨ ಡಾಲರ್ ಕಾಲೋನಿ
೭೧೩ ವಿದ್ಯಾರಣ್ಯಪುರ (ಬೆಂಗಳೂರು)

**ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಈ ಮುಂದಿನ ಶಾಖೆಗಳು :**

೭೧೪ ಬಸವರಾಜ ಮಾರ್ಕೆಟ್
೭೧೫ ಸುಧಾಮನಗರ
೭೧೬ ಚೆನ್ನಗಿರಿ
೭೧೭ ದಿ ಗಾಂಧಿಗಂಜ್ ಪ್ರೈಮರಿ ಕೋ ಆಪ್ ಕ್ರೆಡಿಟ್ ಬ್ಯಾಂಕ್, ಬಿದರೆ
೭೧೮ ಜನತಾ ಕೋ ಆಪ್ ಬ್ಯಾಂಕ್, ಉಡುಪಿ
೭೧೯ ಶ್ರೀರಾಮ ಕೋ-ಆಪ್‌ಬ್ಯಾಂಕ್, ಬೆಂಗಳೂರು
೭೨೦ ದಿ ಕಾಳಿದಾಸ ಸಹಕಾರಿ ಬ್ಯಾಂಕ್ ನಿಯಮಿತ, ಬೆಂಗಳೂರು
೭೨೧ ದಿ ಸದಲಗಾ ಅರ್ಬನ್ ಕೋ-ಆಪ್ ಬ್ಯಾಂಕ್ ಸದಲಗಾ
೭೨೨ ದಿ ಮೈಸೂರ್ ಮರ್ಚೆಂಟ್ಸ್ ಕೋ-ಆಪ್ ಬ್ಯಾಂಕ್, ಮೈಸೂರು
೭೨೩ ದಿ ಭಾವಸಾರ ಕ್ಷತ್ರಿಯ ಕೋ-ಆಪ್ ಕ್ರೆಡಿಟ್ ಬ್ಯಾಂಕ್, ತಾಳಿಕೋಟಿ
೭೨೪ ದಿ ಕರ್ನಾಟಕ ಅರ್ಬನ್ ಕೋ-ಆಪ್ ಬ್ಯಾಂಕ್ ಮುದ್ದೇಬಿಹಾಳ
೭೨೫ ದಿ ಅರಸೀಕೆರೆ ಅರ್ಬನ್ ಕೋ-ಆಪ್ ಬ್ಯಾಂಕ್, ಅರಸೀಕೆರೆ
೭೨೬ ದಿ ಅರ್ಬನ್ ಕೋ-ಆಪ್ ಬ್ಯಾಂಕ್ ಲಿಮಿಟೆಡ್, ಶಿಕಾರಿಪುರ
೭೨೭ ದಿ ಜಮಖಂಡಿ ಅರ್ಬನ್ ಕೋ-ಆಪ್ ಬ್ಯಾಂಕ್, ಜಮಖಂಡಿ
೭೨೮ ದಿ ಸಿಂದಗಿ ಅರ್ಬನ್ ಕೋ-ಆಪ್ ಬ್ಯಾಂಕ್, ಸಿಂದಗಿ
೭೨೯ ದಿ ಚಿಕ್ಕೋಡಿ ಅರ್ಬನ್ ಕೋ-ಆಪ್ ಬ್ಯಾಂಕ್ ಚಿಕ್ಕೋಡಿ

# ಕೈಗಾರಿಕಾ ಅಸ್ವಸ್ಥತೆ

**ಕೈಗಾರಿಕಾ ಅಸ್ವಸ್ಥತೆ ಒಂದು ಜೈವಿಕ ಪ್ರವೃತ್ತಿ. ಇದಕ್ಕೆ ಕಾರಣಗಳು ಹಲವು. ಇದು ಬ್ಯಾಂಕುಗಳಿಗೆ ತೀವ್ರ ಕಾಳಜಿ ಉಂಟುಮಾಡುವ ವಿಷಯವಾಗಿದೆ.**

**ಎಸ್. ಸೀತಾರಾಮು**

ಬೋಧಕರು, ಸಿಬ್ಬಂದಿ ತರಬೇತಿ ಕೇಂದ್ರ,
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು

ಮಾನವ ಸಮಾಜದಲ್ಲಿ ಅನಾರೋಗ್ಯ ಅಥವಾ ಶಿಶು ಮರಣ ಹೇಗೆ ಸಾಮಾನ್ಯವೋ ಹಾಗೆ ಕೈಗಾರಿಕಾ ಕ್ಷೇತ್ರದಲ್ಲಿ ಘಟಕಗಳ ಅಸ್ವಸ್ಥತೆ ಅಥವಾ ಮರಣವೂ ಅನಿವಾರ್ಯ. ಆದರೆ ಭಾರತದಂಥ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಕೈಗಾರಿಕಾ ಅಸ್ವಸ್ಥತೆ ಹೆಚ್ಚಾದಾಗ ಅದರ ಪರಿಣಾಮ ಮಾತ್ರ ಬಹಳ ವಿಪತ್ಕಾರಿಯಾಗುತ್ತದೆ. ಏಕೆಂದರೆ ವಿರಳ ಸಂಪನ್ಮೂಲಗಳು ಹಾಳಾಗುತ್ತವೆ. ಉತ್ಪಾದನೆ ತಗ್ಗುತ್ತದೆ. ಕೆಲವು ವೇಳೆ ಇಂತಹ ಘಟಕಗಳ ಮೇಲೆ ಕಚ್ಚಾ ಮಾಲಿಗಾಗಿ ಅಥವಾ ಉತ್ಪಾದಿತ ವಸ್ತುಗಳಿಗಾಗಿ ಅವಲಂಬಿತವಾಗಿರುವ ಇತರ ಕೈಗಾರಿಕಾ ಘಟಕಗಳೂ ನಿಷ್ಕ್ರಿಯವಾಗುತ್ತವೆ. ನಿರುದ್ಯೋಗ ಸಮಸ್ಯೆ ಉಲ್ಬಣವಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಬೆಳೆಯುವ ಅಸ್ವಸ್ಥತೆ ಬಂಡವಾಳ ಹೂಡುವಿಕೆಯನ್ನು ತಗ್ಗಿಸಿ, ಇಡೀ ಕೈಗಾರಿಕಾ ವಾತಾವರಣವನ್ನ ಕಲುಷಿತಗೊಳಿಸುತ್ತದೆ.

ಕೈಗಾರಿಕೆಗಳ ಅಸ್ವಸ್ಥತೆ ಒಂದು ಜೈವಿಕ ಪ್ರವೃತ್ತಿ. ಇದಕ್ಕೆ ಹಲವಾರು ಕಾರಣಗಳು. ಕೆಲವು ಕೈಗಾರಿಕಾ ಘಟಕಗಳ ಹಿಡಿತ ಮೀರಿದಂಥವು ಇದ್ದಾಗ್ಯೂ ಅಸಮರ್ಪಕ ವ್ಯವಸ್ಥಾಪನ ಅತಿ ಸಾಮಾನ್ಯವಾದ ಕಾರಣ ಎಂದು ತಿಳಿದುಬಂದಿದೆ. ಹಣಕಾಸು, ತಾಂತ್ರಿಕ, ಕಾರ್ಮಿಕ ಮತ್ತು ಯಂತ್ರೋಪಕರಣಗಳಂಥ ಯಾವುದೇ ಕ್ಷೇತ್ರದ ಅದಕ್ಷ ನಿರ್ವಹಣೆಯಿಂದಾಗಿ ಅಸಮರ್ಪಕ ಕಾರ್ಯಪಾಲನೆಯಾಗಬಹುದು. ಕಾಲ ಕಳೆದಂತೆ ಕೆಲಸಕ್ಕೆ ಬಾರದ ತಂತ್ರಜ್ಞಾನ ಕೂಡ ಕಡಿಮೆ ಉತ್ಪಾದನೆಗೆ ಕಾರಣವಾಗಬಹುದು. ಕಾರಣ ಏನೇ ಇದ್ದರೂ ಬೆಳೆಯುತ್ತಿರುವ ಕೈಗಾರಿಕಾ ಅಸ್ವಸ್ಥತೆ (ಅದರಲ್ಲೂ ಸಣ್ಣ ಕೈಗಾರಿಕಾ ಕ್ಷೇತ್ರದಲ್ಲಿ) ಬ್ಯಾಂಕುಗಳಿಗೆ ತೀವ್ರ ಕಾಳಜಿಯ ವಿಷಯವಾಗಿದೆ. ಏಕೆಂದರೆ ಬ್ಯಾಂಕುಗಳ ಉತ್ಪಾದನ ಬಂಡವಾಳವನ್ನು ಸ್ಥಗಿತಗೊಳಿಸುತ್ತದೆ. ಆದ್ದರಿಂದ ಬ್ಯಾಂಕುಗಳು ಆದಷ್ಟು ಬೇಗ ತಾವು ಸಾಲ ನೀಡಿರುವ ಘಟಕಗಳಲ್ಲಿ ಅಸ್ವಸ್ಥತೆಯನ್ನು ಆರಂಭದಲ್ಲೇ ಕಂಡುಹಿಡಿದು ತಕ್ಕ ಪರಿಹಾರ. ಪುನರುಜ್ಜೀವನ ಕ್ರಮಗಳನ್ನು ತೆಗೆದುಕೊಳ್ಳಬೇಕು.

## ಅಸ್ವಸ್ಥ ಘಟಕ ಎಂದರೆ ಏನು?

ಆಂತರಿಕ ಲಾಭವನ್ನು ಸತತವಾಗಿ ಉತ್ಪಾದಿಸಲು ವಿಫಲವಾದ ಮತ್ತು ತನ್ನ ಉಳಿವಿಗಾಗಿ ಮತ್ತೆ ಮತ್ತೆ ಹೊರಗಿನ ಬಂಡವಾಳ ಹೂಡಿಕೆಯ ಮೇಲೆ ಅವಲಂಭಿಸುವಂಥ ಘಟಕವನ್ನು ಅಸ್ವಸ್ಥ ಘಟಕ ಎನ್ನಬಹುದು. ಸಾಮಾನ್ಯವಾಗಿ ಗ್ರಾಹಕಘಟಕಗಳು ತಮ್ಮ ಹಣಕಾಸು ವರದಿಗಳನ್ನು ಸಮಯಕ್ಕೆ ಸರಿಯಾಗಿ ಬ್ಯಾಂಕುಗಳಿಗೆ ಸಲ್ಲಿಸದಿರುವುದರಿಂದ ಅವುಗಳ ಹಿಂದಿನ ಕಾರ್ಯಸಾಧನೆಯ ಮೇಲೆ ಅವು ಸ್ವಸ್ಥವೊ ಅಸ್ವಸ್ಥವೊ ಎಂಬುದಾಗಿ ನಿರ್ಧರಿಸುವುದು ಒಂದು ಅಂತಸ್ಥ ಸಮಸ್ಯೆಯಾಗುತ್ತದೆ. ಅಂಥ ಸಂದರ್ಭದಲ್ಲಿ ಈ ಮುಂದಿನ ಕೆಲವು ಮಾಪನಗಳನ್ನ ಉಪಯೋಗಿಸಬೇಕಾಗುತ್ತದೆ:

1 6ರಿಂದ 12 ತಿಂಗಳ ವರೆಗೆ ಅತಿ ಕಡಮೆ ವಿಕ್ರಯ ತೋರುವಂಥ ಘಟಕ;

2 ಒಂದು ಘಟಕದ ದುಡಿಯುವ ಬಂಡವಾಳ ಖಾತೆಯಲ್ಲಿ ಸತತವಾಗಿ 12ರಿಂದ 18 ತಿಂಗಳುಗಳ ವರೆಗೆ ನಿರಾಧಾರ ಅನಿಯತತೆ ಇದ್ದರೆ;

3 ಆಂತರಿಕ ಅಥವಾ ಬಾಹ್ಯಕಾರಣಗಳಿಂದಾಗಿ ಉತ್ಪಾದನೆ ಆರು ತಿಂಗಳುಗಳಿಗಿಂತ ಹೆಚ್ಚಾಗಿ ಸ್ಥಗಿತವಾಗಿರುವಂತಹ ಘಟಕ;

4 ಅತಿ ದ್ರವತ್ವ ಸಮಸ್ಯೆಗಳನ್ನು ಹೊಂದಿರುವಂಥ ಘಟಕಗಳು—ಎಂದರೆ ಹೆಚ್ಚು ವಿವಿಧ ಧನಿಗಳು, ಕಡಿಮೆ ಪ್ರಾಪ್ಯಗಳು, ಅಸಮರ್ಪಕ ನಗದು ನಿರ್ವಹಣೆ ಇತ್ಯಾದಿ;

5 ನೇತ್ಯಾತ್ಮಕ ಬಂಡವಾಳ ಇರುವಂಥ ಘಟಕ—ಯಾವುದೇ ಘಟಕದ ಮೂಲ ಬಂಡವಾಳದ 50% ನಶಿಸಿಹೋಗಿದ್ದರೆ.

## ಅಸ್ವಸ್ಥತೆಯ ಕುರುಹುಗಳು

ಒಂದು ಘಟಕ ಕಾಲಕ್ರಮೇಣ ಅಸ್ವಸ್ಥವಾಗುವುದೇ ಹೊರತು ತತ್‌ಕ್ಷಣ ಅದರಲ್ಲಿ ಅನಾರೋಗ್ಯ ಉದ್ಭವವಾಗುವುದಿಲ್ಲ. ಗ್ರಾಹಕ ಖಾತೆಗಳ ಕೂಲಂಕಷ ಪರಿಶೀಲನೆ ಮತ್ತು ಸಾಲಗಳ ವ್ಯವಸ್ಥಿತ ನಿರೀಕ್ಷಣೆ ಮೊಳೆಯುವ ಅಸ್ವಸ್ಥತೆಯ ಬಗ್ಗೆ ಎಚ್ಚರಿಕೆಯ ಮುನ್‌ಸೂಚನೆಗಳನ್ನು ನೀಡುತ್ತವೆ. ಈ ದಿಶೆಯಲ್ಲಿ ಕೆಲವು ಮುಖ್ಯ ಗುರುತುಗಳೆಂದರೆ :

1 ದಾಸ್ತಾನು ತಃಖ್ತೆ ಮತ್ತು ಇತರ ನಿಯಂತ್ರಾತ್ಮಕ (control) ತಃಖ್ತೆಗಳನ್ನು ಸಲ್ಲಿಸದಿರುವುದು ಅಥವಾ ತಪ್ಪು ತಃಖ್ತೆಗಳನ್ನು ಸಲ್ಲಿಸುವುದು ;

2 ಸತತವಾಗಿ ನಿರ್ಧಾರಿತ ವಾಶಿಯನ್ನು (ಸ್ವಭಾಗವನ್ನು) ಉಳಿಸಿಕೊಂಡು ಬರಲು ಅಶಕ್ತವಾಗಿರುವುದು ;

3 ಖಾತೆಯಲ್ಲಿನ ಶಿಲ್ಕಿಗೂ ಮೀರೆಳೆತದ ಅಧಿಕಾರ/ಮಿತಿಗೂ ನಡುವೆ ಬೆಳೆಯುತ್ತಿರುವ ಅಂತರ;

4 ಖಾತೆಗೆ ಋಣಿಸಿದ ನಿಯತಕಾಲಿಕ ಬಡ್ಡಿಯನ್ನು ಸಂದಾಯ ಮಾಡದೆ ಖಾತೆ ಅನಿಯತವಾಗಿರುವುದು;

5 ಇತರ ಬ್ಯಾಂಕಿನ ಖಾತೆಗಳ ಮುಖಾಂತರ ವಿಕ್ರಯೋತ್ಪತ್ತಿಯನ್ನು (Sale proceeds) ಬೇರೆಡೆಗೆ ತಿರುಗಿಸುವ ಪ್ರಯತ್ನಗಳು;

6 ಚೆಕ್ಕು ಮತ್ತು ಹುಂಡಿಗಳ ಪದೇ ಪದೇ ವಾಪಸಾತಿ;

7 ನಗದು ಉದರಿ ಖಾತೆಯಲ್ಲಿ ಸತತವಾಗಿ ಇರುವ ಅನಿಯತತೆ;

8 ಸ್ಥಾಪಿತ ಸಾಮರ್ಥ್ಯದ ಕಡಿಮೆ ಉಪಯೋಗ;

9 ಲಾಭದ ಅಸ್ಥಿರತೆ, ವಿಕ್ರಯದ ಅಧೋಗತಿ, ಲಾಭದ ಸ್ಥಗಿತತೆ ಅಥವಾ ಕಡಿಮೆಯಾಗುವಿಕೆ, ಇದನ್ನನುಸರಿಸಿ ಘಟಕದ ಮಾರುಕಟ್ಟೆಯ ಭಾಗದಲ್ಲಿನ ಕಡಿತ ;

10 ಹೆಚ್ಚು ಪ್ರಮಾಣದಲ್ಲಿ ಉತ್ಪಾದಿತ ವಸ್ತುಗಳ ತಿರಸ್ಕರಣ;

11 ಧನಿಕ ಸಂಕಲನಗಳು ಕಡಿಮೆಯಾಗುವುದು—ಸಾಮಾನ್ಯವಾಗಿ ಘಟಕಗಳು ಆರ್ಥಿಕ ಮುಗ್ಗಟ್ಟಿನಲ್ಲಿದ್ದಾಗ ಬೇರೆ ಬ್ಯಾಂಕುಗಳಲ್ಲಿ ಖಾತೆಗಳನ್ನು ತೆರೆದು ತಮ್ಮ ವ್ಯವಹಾರಗಳನ್ನು ಅಲ್ಲಿ ನಡೆಸಲು ಶುರುಮಾಡುತ್ತವೆ;

12 ಪರಿನಿಯತ ಹೊಣೆಗಳನ್ನು (Statutory Liabilities) ತೀರಿಸದೆ ಇರುವುದು;

13 ಹುಂಡಿ / ಉದರಿ ಖಾತೆಗಳಲ್ಲಿ ಹೆಚ್ಚು ಮೊತ್ತದ ಮತ್ತು ದೀರ್ಘಾವಧಿ ಬಾಕಿಗಳು;

14 ಬ್ಯಾಂಕಿನ ಮುಖಾಂತರ ಪರಿಕ್ರಮಣಗೊಳಿಸಿದ (Negotiated) ವಿಕ್ರಯ ಸಂಲೇಖಗಳ ಮೇಲೆ ದೀರ್ಘಾವಧಿಯ ಸಾಲ ನೀಡಿಕೆ ಮತ್ತು ಅವುಗಳ ಪದೇಪದೇ ವಾಪಸಾತಿ;

15 ನಗದು ಉದರಿ ಸೌಲಭ್ಯವನ್ನು ಯಾವಾಗಲೂ ಪರಿಪೂರ್ಣವಾಗಿ ಉಪಯೋಗಿಸುವುದು ಮತ್ತು ಅವಧಿ ಸಾಲಗಳ ಮೇಲಿನ ಕಂತು ಮತ್ತು ಬಡ್ಡಿಯನ್ನು ಸಕಾಲದಲ್ಲಿ ಕಟ್ಟಲು ವಿಫಲವಾಗಿರುವುದು;

16 ಸಕಾಲದಲ್ಲಿ ಆಸ್ತಿ-ಹೊಣೆ ಮುಂತಾದ ಹಣಕಾಸು ತಃಖ್ತೆ/ದಾಸ್ತಾನು ತಃಖ್ತೆಗಳನ್ನು ಸಲ್ಲಿಸದೆ ಇರುವುದು;

17 ಸ್ಥಿರ ಆಸ್ತಿಗಳನ್ನು ಪಡೆಯಲು ದುಡಿಯುವ ಬಂಡವಾಳವನ್ನು ಉಪಯೋಗಿಸುವುದು;
18 ಕೈಗಾರಿಕೆಯಲ್ಲಿನ ಸಾಮಾನ್ಯ ಇಳಿತ ;
19 ಮುಖ್ಯ ಉದ್ಯೋಗಿ/ಅಧಿಕಾರಿಗಳ ಶೀಘ್ರ ಬದಲಾವಣೆ;
20 ಘಟಕದ ಮೇಲೆ ಅನೇಕ ದಾವೆಗಳು;
21 ಸ್ವಲ್ಪ ಸಮಯದಲ್ಲೇ ಅತಿ ಶೀಘ್ರ ವಿಸ್ತರಣೆ ಮತ್ತು ವಿವಿಧತೆಯನ್ನು ತರುವುದು;
22 ಬಂಡವಾಳವನ್ನು ಉದ್ದಿಮೆ ನಡೆಸಲು ಉಪಯೋಗಿಸದೆ ಇತರ ಕಾರ್ಯಗಳಿಗಾಗಿ ತಿರುಗಿಸುವುದು;
23 ಘಟಕದ ಪೇರುಸ್ವಾಮಿತ್ವದಲ್ಲಿ ಯಾವುದೇ ಪ್ರಮುಖ ಬದಲಾವಣೆ.

## ಅಸ್ವಸ್ಥತೆಗೆ ಕಾರಣಗಳು

ಮೇಲೆ ಹೇಳಿದ ಲಕ್ಷಣಗಳ ವಿಶ್ಲೇಷಣೆ, ಘಟಕದ ಕಾರ್ಯನಿರ್ವಹಣೆಯ ಅಧ್ಯಯನ ಮತ್ತು ಗ್ರಾಹಕರೊಡನೆ ಸಂಭಾಷಣೆಯಿಂದ ಘಟಕದ ಅಸ್ವಸ್ಥತೆಯ ನಿಜವಾದ ಕಾರಣವನ್ನು ತಿಳಿಯಬಹುದು. ಉದಾಹರಣೆಗೆ ಒಂದು ಘಟಕದ ನಗದು ಉದರಿ ಖಾತೆಯಲ್ಲಿ ಸತತ ಅನಿಯತತೆ ಇದ್ದರೆ ಅದಕ್ಕೆ ನಿಜವಾದ ಕಾರಣ ಆ ಗ್ರಾಹಕ ತನ್ನ ಮನೆ ಕಟ್ಟಲೋ ಅಥವಾ ಇನ್ನಾವುದೋ ಅನುತ್ಪಾದಕ ಕೆಲಸಕ್ಕಾಗಿ ನಗದು ಉದರಿ ಖಾತೆಯಿಂದ ಹಣವನ್ನು ಹೊರತೆಗೆದಿದ್ದರಿಂದಾಗಿರಬಹುದು. ಕೆಳಗೆ ವಿಶದೀಕರಿಸಿದಂತೆ ಅಸ್ವಸ್ಥತೆಯ ಕಾರಣಗಳು ಬಹಳ ಸಲ ಗ್ರಾಹಕನ ಕೈಮೀರಿದ ಬಾಹ್ಯಸ್ವರೂಪದವಾಗಿರಬಹುದು; ಅಥವಾ ಅವು ಆಂತರಿಕ ಕಾರಣಗಳಾಗಿರಬಹುದು.

## ಬಾಹ್ಯ ಕಾರಣಗಳು

1 ಅಧೋರಚನೆಯ ಅಡಚಣೆಗಳು—ಬೇಕಾದಷ್ಟು ಕಚ್ಚಾಮಾಲು ದೊರೆಯದೆ ಇರುವುದು, ತೀರದ (Chronic) ವಿದ್ಯುಚ್ಛಕ್ತಿ ಅಭಾವ, ಸಾರಿಗೆ ಅಡಚಣೆಗಳು;
2 ಹಣಕಾಸು ಅಡಚಣೆಗಳು — ಸರಿಯಾದ ಸಮಯಕ್ಕೆ ಬೇಕಾದಷ್ಟು ಹಣ ದೊರೆಯದೆ ಇರುವುದು;
3 ಸರ್ಕಾರದ ನೀತಿ ನಿಯಮಗಳು—ಸರ್ಕಾರದ ನಿಯಮಿತ ದರಗಳು, ವಿತ್ತೀಯ ಕರಗಳು (fiscal duties), ಆಯಾತ/ನಿರ್ಯಾತ ದರಗಳು, ಪರವಾನೆಗಳಿಗೆ ಸಂಬಂಧಪಟ್ಟಂತೆ ಸರ್ಕಾರಿ ನಿಯಮಗಳಲ್ಲಿ ಹಠಾತ್ ಬದಲಾವಣೆ;
4 ಮಾರುಕಟ್ಟೆಯ ನಿರ್ಬಂಧಗಳು—ಮಾರುಕಟ್ಟೆಯಲ್ಲಿನ ಪೂರ್ಣವ್ಯಾಪಿತ್ವ, ತಾಂತ್ರಿಕ ಕ್ಷೇತ್ರದಲ್ಲಿ ಕ್ರಾಂತಿಕಾರಕ ಬದಲಾವಣೆಯಿಂದಾಗಿ ಒಂದು ಘಟಕದ ವಸ್ತು ಹಳತಾಗುವುದು;
5 ಅನ್ಯ ಕಾರಣಗಳು—ಪ್ರಕೃತಿ ಪ್ರಕೋಪಗಳು, ರಾಜಕೀಯ ಏರಿಳಿತಗಳು.

## ಆಂತರಿಕ ಕಾರಣಗಳು

**1 ಯೋಜನೆ**

i ತಾಂತ್ರಿಕ ಸಾಧ್ಯತೆ—ಅಪರಿಪೂರ್ಣ ತಾಂತ್ರಿಕ ಜ್ಞಾನ, ಸ್ಥಾನದ ಅನನುಕೂಲತೆ ಮತ್ತು ಹಳತಾದ ಉತ್ಪಾದನ ಪದ್ಧತಿ;
ii ಆರ್ಥಿಕ ಜೀವಂತಿಕೆ—ಉತ್ಪಾದನ ಸಾಮಗ್ರಿಗಳ ಮೇಲಿನ ಹೆಚ್ಚು ವೆಚ್ಚ, ಸಮಸ್ಥಿಬಿಂದು ಹೆಚ್ಚಾಗಿರುವುದು. ಲಾಭಕರವಲ್ಲದ ಪರಿಯೋಜನಾ ಗಾತ್ರ, ಹಣಕಾಸು ಅಗತ್ಯದ ಕೀಳಂದಾಜು (Under estimate) ಅಗತ್ಯಕ್ಕಿಂತ ಹೆಚ್ಚಾಗಿ ಸ್ಥಿರ ಆಸ್ತಿಗಳಲ್ಲಿ ಹೂಡಿಕೆ, ಬೇಡಿಕೆಯ ಅತಿ ಅಂದಾಜು (Over estimate).

**2 ಅನುಷ್ಠಾನ**

ಅಗತ್ಯವಾದ ಪರವಾನಗಿ/ಸಮ್ಮತಿ ಪಡೆಯುವುದರಲ್ಲಿ ಆದ ವಿಳಂಬದಿಂದ ಪರಿಯೋಜನಾ ವೆಚ್ಚದ ಹೆಚ್ಚಳ. ಯೋಜನೆಯನ್ನು ಕಾರ್ಯಗತ ಮಾಡಲು ಸಾಕಷ್ಟು ಧನವನ್ನು ಸಿದ್ಧಪಡಿಸಲು ಅಶಕ್ಯವಾಗುವುದು.

**3 ಉತ್ಪಾದನೆ**

ಅಸಮರ್ಪಕ ಉತ್ಪನ್ನ ಮಿಶ್ರಣ (Produce mix), ಕಡಿಮೆ ಮಟ್ಟದ ಗುಣನಿಯಂತ್ರಣ, ಅಸಮರ್ಪಕ ದಾಸ್ತಾನು ನಿಯಂತ್ರಣ (Inventory control).

**4 ಕಾರ್ಮಿಕ ನಿರ್ವಹಣೆ**

ಹೆಚ್ಚು ವೇತನ ಶ್ರೇಣಿ, ಕಾರ್ಮಿಕ ಸಮಸ್ಯೆಗಳ ಅಸಮರ್ಪಕ ಇತ್ಯರ್ಥ, ಕಡಿಮೆ ಕಾರ್ಮಿಕ ಉತ್ಪನ್ನ, ಅಶಾಂತ ಕೈಗಾರಿಕಾ ಸಂಬಂಧ, ನುರಿತ ಮತ್ತು ಕುಶಲ ಕಾರ್ಮಿಕರ ಅಭಾವ.

**5 ಮಾರುಕಟ್ಟೆಯ ನಿರ್ವಹಣೆ**

ಒಬ್ಬನೇ ಗಿರಾಕಿಯ ಮೇಲೆ ಅವಲಂಬಿತವಾಗಿರುವುದು, ವಿಕ್ರಯೋತ್ಪನ್ನದ ಅಸಮರ್ಪಕ ವಸೂಲಾತಿ, ನ್ಯೂನ ಬೆಲೆ ನಿರ್ಧಾರಣ, ಹಣದುಬ್ಬರ ಸ್ಥಿತಿಯಲ್ಲಿ ಸ್ಥಿರ ಬೆಲೆಗೆ ದೊಡ್ಡ ವಿಕ್ರಯ ಆದೇಶಗಳನ್ನು ಒಪ್ಪಿಕೊಳ್ಳುವುದು. ಅನೈತಿಕ ಕ್ರಯ ವಿಕ್ರಯ ಅಭ್ಯಾಸಗಳು.

**6 ಆರ್ಥಿಕ ನಿರ್ವಹಣೆ**

ತಪ್ಪು ಆರ್ಥಿಕ ಯೋಜನೆ ಮತ್ತು ಸಂಪನ್ಮೂಲಗಳ ಅಸಮರ್ಪಕ ನಿರ್ವಹಣೆ, ಅಧಿವ್ಯಾಪಾರ (Over trading) ದುಡಿಯುವ ಬಂಡವಾಳದ ಕಡಿಮೆ ಮಟ್ಟ, ವೆಚ್ಚದ ಪರಿಜ್ಞಾನವಿಲ್ಲದೆ ಇರುವುದು.

**7 ಆಡಳಿತ ನಿರ್ವಹಣೆ**

ಅತಿ ಕೇಂದ್ರೀಕರಣ, ವೃತ್ತಿಪರತೆಯ (Professionalism) ಕೊರತೆ, ಆಡಳಿತ ವರ್ಗಕ್ಕೆ ಅನುಕೂಲವಾಗುವಂತೆ ವ್ಯವಸ್ಥಾಪನ ಮಾಹಿತಿ ವ್ಯವಸ್ಥೆ ಇಲ್ಲದಿರುವುದು, ಆಡಳಿತೆಯಲ್ಲಿ ಒಳಜಗಳ/ಭಿನ್ನಾಭಿಪ್ರಾಯ, ಅಸಮರ್ಥ ಅಥವಾ ಅಪ್ರಾಮಾಣಿಕ ಆಡಳಿತ.

## ಬ್ಯಾಂಕಿನ ಪಾತ್ರ

ಒಂದು ಕೈಗಾರಿಕಾ ಘಟಕ ಮೇಲೆ ತಿಳಿಸಿದ ಯಾವುದೇ ಒಂದು ಅಥವಾ ಹಲವಾರು ಕಾರಣಗಳಿಂದಾಗಿ ಅಸ್ವಸ್ಥವಾಗಿರಬಹುದು. ಆದರ ಅಸ್ವಸ್ಥತೆಗೆ ನಿಜವಾದ ಕಾರಣವನ್ನು ಆದಷ್ಟು ಬೇಗ ಕಂಡುಹಿಡಿದು ಅಗತ್ಯವಿರುವಲ್ಲಿ ಸೂಕ್ತಕ್ರಮವನ್ನು ಕೈಗೊಳ್ಳುವ ಭಾರ ಬ್ಯಾಂಕ್ ವ್ಯವಸ್ಥಾಪಕರ ಮೇಲೆ ಇರುತ್ತದೆ. ಆ ಘಟಕ ಆಡಳಿತ ಅವ್ಯವಸ್ಥೆಯಿಂದಾಗಲಿ ಗ್ರಾಹಕನ ಅಪ್ರಾಮಾಣಿಕತೆಯಿಂದಾಗಲಿ ಅಸ್ವಸ್ಥವಾಗಿದ್ದರೆ ಅಂಥ ಘಟಕಕ್ಕೆ ಸಹಾಯಮಾಡಲು ಬ್ಯಾಂಕಿಗೆ ಸಾಧ್ಯವಾಗುವುದಿಲ್ಲ. ಅಂಥ ಸಂದರ್ಭದಲ್ಲಿ ಬ್ಯಾಂಕಿನ ಬಾಕಿ ವಸೂಲಾತಿಗೆ ಯುಕ್ತಕ್ರಮ ಕೈಗೊಳ್ಳಬೇಕಾಗುತ್ತದೆ. ಆದರೆ ಬೇರೆ ಯಾವುದೇ ಕಾರಣದಿಂದಾಗಿ ಘಟಕ ಅಸ್ವಸ್ಥವಾಗಿದ್ದರೆ ಮತ್ತು ಅದು ಚೇತರಿಸಿಕೊಳ್ಳುವ ಸಾಧ್ಯತೆ ಸ್ವಲ್ಪವಾದರೂ ಇದ್ದರೆ ಪುನರುಜ್ಜೀವನ ಯೋಜನೆಯನ್ನು ರೂಪಿಸಬೇಕಾಗುತ್ತದೆ.

## ಪುನರುಜ್ಜೀವನ ಯೋಜನಾ ರಚನೆ ಮತ್ತು ಮೇಲ್ವಿಚಾರಣೆ

ಅಸ್ವಸ್ಥ ಘಟಕವೊಂದನ್ನು ಗುರುತಿಸಿದನಂತರ ಒಂದು ವ್ಯವಸ್ಥಿತ ಮತ್ತು ವೈಜ್ಞಾನಿಕ ಮಾರ್ಗವನ್ನನುಸರಿಸಿ ಪುನರುಜ್ಜೀವನ ಯೋಜನೆಯನ್ನು ರೂಪಿಸಬೇಕಾಗುತ್ತದೆ. ಇಲ್ಲಿ ಪುನರುಜ್ಜೀವನ ಎಂದರೆ ಒಂದು ಅಸ್ವಸ್ಥ ಘಟಕವನ್ನು ಅದು ಮತ್ತೆ ಆಂತರಿಕ ಲಾಭವನ್ನು ಗಳಿಸುವ ಸ್ಥಿತಿಗೆ ತರುವುದು. ಈ ಕೆಲಸ ಮಾಡಲು ಅನುಸರಿಸಬೇಕಾದ ಕ್ರಮ ಎಂದರೆ :

1 ಘಟಕದ ಹಿಂದಿನ ಕಾರ್ಯ ವ್ಯವಹಾರವನ್ನು ಪರಿಶೀಲಿಸಿ ಅದರ ಶಕ್ತಿ, ದೌರ್ಬಲ್ಯಗಳನ್ನು ಗುರುತಿಸುವುದು, ಪುನರುಜ್ಜೀವನ ಯೋಜನೆ ಫಲಪ್ರದವಾಗಬೇಕಾದರೆ ಅದು ಘಟಕದ ಸಹಜ ಶಕ್ತಿಗಳನ್ನು ಉಪಯೋಗಿಸಿಕೊಂಡು, ದೌರ್ಬಲ್ಯಗಳನ್ನು ಗೆದ್ದು, ಇರುವ ಅವಕಾಶಗಳನ್ನು ಉಪಯೋಗಿಸಿಕೊಂಡು ಬೆದರಿಕೆಗಳನ್ನು ಎದುರಿಸುವಂತೆ ನಿಯೋಜಿತವಾಗಿರಬೇಕು.
2 ಘಟಕ ಲಾಭದಾಯಕವಾಗಲು ಯಾವ ಸಮಸ್ಥಿ ಉತ್ಪಾದನ ಮಟ್ಟ ಮತ್ತು ಚಟುವಟಿಕೆಯ ಸ್ತರದಲ್ಲಿ (activity level) ಕೆಲಸ ಮಾಡಬೇಕು ಎಂಬುದರ ನಿರ್ಧಾರ.
3 ಸ್ಥಾಪಿತ ಯಂತ್ರಸಾಮರ್ಥ್ಯ, ಮಾರುಕಟ್ಟೆ, ಬೆಲೆಕಟ್ಟುವಿಕೆ, ಕಚ್ಚಾಮಾಲಿನ ಲಭ್ಯತೆ ಮುಂತಾದ

7ನೇ ಪುಟ ನೋಡಿ]

# ಹದಿಹರೆಯದ ಗ್ರಾಮೀಣ ಬ್ಯಾಂಕುಗಳು

## ಕೆಲವು ಸಮಸ್ಯೆಗಳು

**ಹೆತ್ತ ಮಗುವನ್ನೇ ಕೊಲ್ಲುವುದುಂಟೆ? ಆದರೆ ಗ್ರಾಮೀಣ ಬ್ಯಾಂಕುಗಳ ವಿಚಾರದಲ್ಲಿ ಈ ಮಾತು ನಿಜವಾಗ್ತಿದೆಯೆ? ಗ್ರಾಮೀಣ ಬ್ಯಾಂಕುಗಳ ಭವಿಷ್ಯ ಕುರಿತ ಒಂದು ವಿವೇಚನೆ: ಕಟುವಾದರೂ ನಮ್ಮನ್ನು ಯೋಚನೆಗೆ ಹಚ್ಚುತ್ತದೆ.**

**ಚೋರಗಿ ಶ್ರೀಮಂತರಾವ್ ಸಿದ್ದಣ್ಣ**
ಉಪನ್ಯಾಸಕ,
ಶ್ರೀ ಸಂಗಮೇಶ್ವರ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ; ಚಡಚಣ 586205

1975ರಲ್ಲಿ ಜನ್ಮತಳೆದ ನಮ್ಮ ಗ್ರಾಮೀಣ ಬ್ಯಾಂಕುಗಳಿಗೆ ಈಗ 13 ವರ್ಷ ವಯಸ್ಸು. ತಮ್ಮ ಹತ್ತು-ಹನ್ನೆರಡು ಬಯಕೆಗಳನ್ನು ಈಡೇರಿಸಿಕೊಳ್ಳಲು ಮಗುವನ್ನು ಹೆತ್ತ ದಂಪತಿಗಳು, ಎಂದಿಗೂ ಆ ಮಗುವನ್ನು ಇಲ್ಲದಂತೆ ಮಾಡುವುದಕ್ಕೆ ಹವಣಿಸುವುದಿಲ್ಲ. ಮಗನ ಆರೋಗ್ಯ, ಶಿಕ್ಷಣ, ಕೀರ್ತಿ, ಒಟ್ಟಾರೆ ಆತನ ಸರ್ವಾಂಗೀಣ ಪ್ರಗತಿಯ ಬಗ್ಗೆ ಅವರಿಗೆ ತುಂಬು ಆಸಕ್ತಿ ಇರುತ್ತದೆ. ಗ್ರಾಮೀಣ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಇದರ ವಿರುದ್ಧ ಕಾರ್ಯ ನಡೆದಂತೆ ತೋರುತ್ತಿದೆ. ಏಕೆಂದರೆ ಈ ವರ್ಷದ ಹಿಂದೆ ಗ್ರಾಮೀಣ ಬ್ಯಾಂಕುಗಳು ಅನುಭವಿಸುತ್ತಿರುವ ಹಾನಿಯನ್ನು ತಡೆದುಕೊಳ್ಳಲಾಗದೆಯೇ ಮಾತ್ರ ಸರ್ಕಾರ (ಕೇಂದ್ರ) ಅವುಗಳನ್ನು ಮುಚ್ಚುವ/ವಿಲೀನೀಕರಣಗೊಳಿಸುವ ವಿಚಾರದಲ್ಲಿತ್ತು ಎಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಹೀಗೆ ಮಾಡುವುದಕ್ಕಿಂತ ಮುಂಚೆ ಈ ಹದಿಹರೆಯದ ಮಗ ಹಾನಿ ಅನುಭವಿಸುತ್ತಿರುವುದಕ್ಕೆ ಕಾರಣಗಳೇನು? ನನ್ನ ಮಗ ಹೀಗಾಗಲಿಕ್ಕೆ ಕಾರಣವೇನು ಎಂದು ವಿಚಾರಿಸುವುದು ಬೇಡವೆ? ಬೇಕು. ಯಾಕೆ ಈ ಬ್ಯಾಂಕುಗಳು ಬಳಲುತ್ತಿವೆ, ಎಂಬ ಪ್ರಶ್ನೆಗೆ ಪರಿಹಾರಗಳನ್ನು ಗುರುತಿಸಿ ಅವುಗಳಿಗೆ ಉತ್ತಮವಾದ ವಾತಾವರಣವನ್ನು ಒದಗಿಸಿ ಅವು ಸಮೃದ್ಧವಾಗಿ ಬೆಳೆಯಲು ಶಕ್ತಿಯುತ ಆಹಾರ ಪೂರೈಕೆ ಮಾಡುವುದು ಅನಿವಾರ್ಯವಾದ ಮಾತಾಗಿದೆ.

### ದುಸ್ಥಿತಿಯ ಕಾರಣಗಳು

1 ಪ್ರಾಥಮಿಕ ಹಂತದಿಂದಲೇ ವಿದ್ಯಾರ್ಥಿಗಳಿಗೆ ಬ್ಯಾಂಕು-ವ್ಯವಹಾರದ ಬಗ್ಗೆ ತಿಳಿವಳಿಕೆ ಮತ್ತು ಪ್ರಾಯೋಗಿಕ ಮಾಹಿತಿಯನ್ನು ನೀಡದೆ ಇರುವದು;

2 ಗ್ರಾಹಕ-ಬ್ಯಾಂಕರುಗಳ ಮಧ್ಯದ ಸಂಬಂಧ ಅಷ್ಟೊಂದು ಸಲೀಸಾಗಿ, ಅಂದರೆ ದಿನಸಿ ವಿನಿಮಯ ವ್ಯಾಪಾರಿಯ ಹಾಗೆ, ಇಲ್ಲ;

3 ಬ್ಯಾಂಕಿನ ಸಿಬ್ಬಂದಿಯಲ್ಲಿ (ಕೆಳಹಂತದಿಂದ ಅಧಿಕಾರಿಯವರೆಗೆ) ನಿಷ್ಠೆ, ಪ್ರಮಾಣಿಕತೆ, ಸೇವಾ ಗೌರವ ಮುಂತಾದ ಮಾನವೀಯ, ನೈತಿಕ ಗುಣಗಳ ಕೊರತೆ;

4 ಸುಶಿಕ್ಷಿತರ ಅಶಿಕ್ಷಿತತನ;

5 ಬ್ಯಾಂಕಿನ ಸಿಬ್ಬಂದಿಯ ಲಂಚಕೋರತನ;

6 ಬ್ಯಾಂಕು ಸಿಬ್ಬಂದಿಯ ಮೇಲೆ ಗ್ರಾಮಸ್ಥರ ಕೆಟ್ಟ ಪ್ರಭಾವ;

7 ರಾಜಕೀಯ ಕೈವಾಡ, ದುರುದ್ದೇಶ ಮತ್ತು ಪ್ರಭಾವ.

ಮೂಲ ಶಿಕ್ಷಣದ ಹಂತದಲ್ಲಿ ಅಷ್ಟೇ ಅಲ್ಲ, ಪದವೀಧರರೂ ಬ್ಯಾಂಕಿನ ವ್ಯವಹಾರದ ಬಗ್ಗೆ ಸ್ಫುಟವಾದ ಕಲ್ಪನೆಗಳನ್ನು ಹೊಂದದೆ ಇರುವದು ದುರದೃಷ್ಟಕರವಾಗಿದೆ. ಬ್ಯಾಂಕು ಸಿಬ್ಬಂದಿ ಸಾಲ ನೀಡುವಲ್ಲಿ, ಉದ್ದೇಶಗಳನ್ನು ವಿಚಾರಿಸದೆಯೆ ಸಾಲ ನೀಡಲು ದಲ್ಲಾಳಿ ಗಿಟ್ಟಿಸುವ ಪ್ರವೃತ್ತಿ ಪ್ರಾರಂಭವಾಗಿದೆ. ವಸೂಲಿ ವೇಳೆಯಲ್ಲಿ ಕೈ ಬೆಚ್ಚಗೆ ಮಾಡಿದರೆ ವಸೂಲಿ ಮುಂದಕ್ಕೆ ಹೋಯಿತು ಎನ್ನಬೇಕು. ಸಾಲ ಪಡೆದ ಫಲಾನುಭವಿಗಳು ನಡೆಸಿದ ಕಾರ್ಯಗಳನ್ನು ಸರಿಯಾಗಿ ಪರಿವೀಕ್ಷಣೆ ಮಾಡದೆ ಇರುವುದು, ಬಾವಿಯ ಕುರುಹು ಸಹ ಇಲ್ಲದೆ ಅದಕ್ಕೆ ಸಾಲ ನೀಡಿದ ಪ್ರಸಂಗಗಳು ಹಲವಾರಿವೆ. ಸೇವಾ ಭಾವ, ನೈತಿಕ ಸ್ಥಿರತೆ, ಸಾಚಾ ಭಾವಗಳೇ ಇಲ್ಲ. ಈ ಬ್ಯಾಂಕು ನಮ್ಮದು, ಇದನ್ನು ಪ್ರಾಮಾಣಿಕತೆ

---

## ಕೈಗಾರಿಕಾ ಅಸ್ವಸ್ಥತೆ

[6ನೇ ಪುಟದಿಂದ ಮುಂದುವರಿದುದು

ಎಲ್ಲ ಕ್ಷೇತ್ರಗಳ ಪರಿಶೀಲನೆಯ ಅನಂತರ ಮೇಲೆ 2ರಲ್ಲಿ ನಿರ್ಧರಿಸಿದ ಮಟ್ಟದಲ್ಲಿ ಕೆಲಸ ಮಾಡಲು ಘಟಕಕ್ಕೆ ಸಾಧ್ಯವುಂಟೇ ಇಲ್ಲವೇ ಎಂಬ ನಿರ್ಧಾರ.

4 ಇದಕ್ಕೆ ಬೇಕಾದ ದುಡಿಯುವ ಬಂಡವಾಳದ ನಿರ್ಧಾರ.

5 ಗ್ರಾಹಕ ತರಬಲ್ಲಂಥ ಹೆಚ್ಚಿನ ಬಂಡವಾಳ, ಬಾಕಿಗಳ ವಸೂಲಾತಿ, ಕೆಲಸಕ್ಕೆ ಬಾರದ ದಾಸ್ತಾನು ಮತ್ತು ಯಂತ್ರೋಪಕರಣಗಳು, ಹಾಗೂ ಇತರ ಆಸ್ತಿಗಳ ಮಾರಾಟ, ಮುಂತಾದ ಮೂಲಗಳಿಂದ ಬರುವ ಒಟ್ಟಾರೆ ಹಣದ ನಿರ್ಧಾರ.

6 ಮುಖ್ಯವಾಗಿ ಅಸ್ವಸ್ಥತೆಗೆ ಕಾರಣವಾದ ದೌರ್ಬಲ್ಯಗಳನ್ನು ಹೋಗಲಾಡಿಸಲು ಮಾಡಿರುವ ಕ್ರಮಗಳ ಮತ್ತು ಪುನರ್ವಸತಿ ಕಾರ್ಯಕ್ರಮದ ಅನುಷ್ಠಾನದ ಬಗಿ ಮೇಲ್ವಿಚಾರಣೆ ಮಾಡಲು ಪ್ರಮುಖ ಕಾರ್ಯಪಾಲನಾ ಸೂಚಿಗಳನ್ನು (key performance indicators) ಗುರುತಿಸುವುದು.

ಅಸ್ವಸ್ಥ ಘಟಕದ ಪುನರುಜ್ಜೀವನ ಎಲ್ಲಕ್ಕಿಂತ ಮುಖ್ಯವಾಗಿ ಗ್ರಾಹಕ ಅಥವಾ ಘಟಕದ ವ್ಯವಸ್ಥಾಪನ ಸಂಪೂರ್ಣವಾಗಿ ತನ್ನನ್ನು ಆ ಕೆಲಸದಲ್ಲಿ ತೊಡಗಿಸಿಕೊಂಡು ನಿಯೋಜಿತ ಕಾರ್ಯಕ್ರಮದಂತೆ ನಡೆದುಕೊಂಡಾಗ ಮಾತ್ರ ಸಾಧ್ಯವಾಗುತ್ತದೆ.

ಪುನರುಜ್ಜೀವನ ಕಾರ್ಯದಲ್ಲಿ ತಪ್ಪಿಗೆ ಎಡೆಯಿಲ್ಲ. ಅಸ್ವಸ್ಥ ಘಟಕದ ಪುನರುಜ್ಜೀವನ ಕೆಲಸ ಒಂದು ಸೂಕ್ಷ್ಮವಾದ ಮತ್ತು ಗುರುತರವಾದ ಕೆಲಸ. ಆದ್ದರಿಂದ ಬ್ಯಾಂಕಿನ ಅಧಿಕಾರಿಗಳು ಆ ಕೆಲಸವನ್ನು ಪ್ರಾರಂಭ ಮಾಡಿದುದರಿಂದ ಸೂಕ್ತ ವ್ಯವಸ್ಥಾಪನ ಮಾಹಿತಿ ವ್ಯವಸ್ಥೆಯನ್ನು ಜಾರಿಗೆ ತಂದು, ಹಣದ ಸದುಪಯೋಗವಾಗುವಂತೆ ನೋಡಿಕೊಂಡು, ಗ್ರಾಹಕರೊಡನೆ ಕಾರ್ಯಕ್ರಮದ ಅನುಷ್ಠಾನ ಮತ್ತು ಅಭಿವೃದ್ಧಿಯ ಬಗ್ಗೆ ಪದೇಪದೇ ವಿಚಾರ ಮಾಡುತ್ತ, ಕಾರ್ಯಕ್ರಮ ಫಲಪ್ರದವಾಗುವಂತೆ ಬಗಿ ಮೇಲ್ವಿಚಾರಣೆ ಮಾಡಬೇಕು. ಈ ಸಂದರ್ಭದಲ್ಲಿ ಒಬ್ಬ ಬ್ಯಾಂಕರ್ ನಿಜವಾಗಿ ಆ ಘಟಕದ ಸ್ನೇಹಿತ, ದಾರ್ಶನಿಕ ಮತ್ತು ಮಾರ್ಗದರ್ಶಿಯಾಗಿ ಕೆಲಸಮಾಡಿ ಅದು ಆರೋಗ್ಯವಂತವಾಗುವಂತೆ ಮಾಡಬೇಕು. ★

# ಋಣದ ಹಕ್ಕು ಮತ್ತು ಮೋಸದ ಲಾಭ

**ಸಾಲದ ಒಪ್ಪಿಗೆ ಪತ್ರಕ್ಕೆ ಜಾಮೀನುದಾರ ಸಹಿ ಮಾಡದೆ ಇದ್ದ ಪಕ್ಷಕ್ಕೆ ಅವನ ವಿರುದ್ಧ ಋಣದ ಹಕ್ಕು ಚಲಾಯಿಸಬಹುದೆ? ಸತ್ಯಾಂಶವನ್ನು ಬಚ್ಚಿಟ್ಟು ಮಾಡಿಕೊಂಡ ಒಪ್ಪಂದ ಸಿಂಧುವಾಗಬಹುದೆ? ಈ ಎರಡು ಸ್ವಾರಸ್ಯಕರ ಪ್ರಶ್ನೆಗಳಿಗೆ ನ್ಯಾಯಾಲಯಗಳಲ್ಲಿ ದೊರಕಿರುವ ಉತ್ತರಗಳು ಇಲ್ಲಿವೆ**

**ರಾಜಾರಾಮ ಹೆಗಡೆ**
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು

## ಋಣ ಮತ್ತು ಜಾಮೀನು

ಜಾಮೀನುದಾರ ಸಾಲದ ಒಪ್ಪಿಗೆ ಪತ್ರಕ್ಕೆ (acknowledgment) ಸಹಿ ಮಾಡದೆ ಇದ್ದ ಪಕ್ಷದಲ್ಲಿ, ಮೂಲ ಋಣಿ (Principal debtor) ಸಹಿ ಮಾಡಿದ ಸಾಲದ ಒಪ್ಪಿಗೆ ಪತ್ರಕ್ಕೆ ಬದ್ಧನಾಗುತ್ತಾನೆಯೆ? ಅಥವಾ ಅಂಥ ಸಂದರ್ಭಗಳಲ್ಲಿ ಜಾಮೀನುದಾರನ ವಿರುದ್ಧ ಋಣದ ಹಕ್ಕು ಚಲಾಯಿಸುವಿಕೆ (enforcemout of debı) ಸಾಧ್ಯವೆ? ಎನ್ನುವ ಪ್ರಶ್ನೆ ಬ್ಯಾಂಕರುಗಳ ಮುಂದೆ ಆಗಾಗ್ಗೆ ಬರುವುದುಂಟು. ಈ ಪ್ರಶ್ನೆಯನ್ನು ಕರ್ನಾಟಕ ಉಚ್ಚ ನ್ಯಾಯಾಲಯ ಕೂಲಂಕಷವಾಗಿ ಪರಿಶೀಲಿಸಿ, ಅಂಥ ಸಂದರ್ಭಗಳಲ್ಲಿ, ಜಾಮೀನುದಾರ ಬದ್ಧನಾಗಿರುವದಿಲ್ಲವೆಂದೂ, ಆತನ ವಿರುದ್ಧ ಕ್ರಮ ಸಾಧ್ಯವಿಲ್ಲವೆಂದೂ ತಿಳಿಸಿ, ಸಿಂಡಿಕೇಟ್ ಬ್ಯಾಂಕು, ವಿರುದ್ಧ ಟಿ. ಬಸಪ್ಪ ಮತ್ತು ಇತರರು—ವ್ಯಾಜ್ಯದಲ್ಲಿ ತೀರ್ಪು ನೀಡಿದೆ.

ಈ ವ್ಯಾಜ್ಯದ ಸಂಕ್ಷಿಪ್ತ ವಿವರಗಳು ಇಂತಿವೆ: 'ಅ' ಎಂಬ ಮೂಲ ಋಣಿ (Principal debtor) ಬ್ಯಾಂಕಿನಿಂದ ಪಡೆದ ಹಣಕ್ಕೆ 'ಬ' ಮತ್ತು 'ಕ' ಎಂಬವರು ಜಾಮೀನು ನೀಡಿದ್ದರು. ತದನಂತರ ತೆಗೆದುಕೊಳ್ಳಲಾದ ಸಾಲದ ಒಪ್ಪಿಗೆ ಪತ್ರಕ್ಕೆ 'ಅ' ಮತ್ತು 'ಬ' ಮಾತ್ರವೇ ಸಹಿ ಮಾಡಿದ್ದರು. 'ಕ' ಸಹಿ ಮಾಡಿರಲಿಲ್ಲ. 'ಅ' ಮತ್ತು 'ಬ'ರಿಂದ ಸಹಿ ಮಾಡಲ್ಪಟ್ಟ 'ಕ' ಸಾಲದ ಒಪ್ಪಿಗೆ ಪತ್ರಕ್ಕೆ 'ಕ'ನೂ ಬದ್ಧನೇ? ಆತನ ವಿರುದ್ಧವೂ ಡಿಕ್ರಿ ಸಾಧ್ಯವೆ? ಎನ್ನುವ ಪ್ರಶ್ನೆ ಎತ್ತಲ್ಪಟ್ಟು, ಕೆಳನ್ಯಾಯಾಲಯ ಅದಕ್ಕೆ ನಕಾರಾತ್ಮಕವಾಗಿ ಉತ್ತರ ನೀಡಿತು. 'ಅ' ಮತ್ತು 'ಬ' ಸಹಿ ಮಾಡಿದ ಸಾಲದ ಒಪ್ಪಿಗೆ ಪತ್ರಕ್ಕೆ 'ಕ' ಬದ್ಧನಲ್ಲವೆಂದೂ, ಆತ ಸಹಿ ಮಾಡದೆ ಇರುವ ಕಾರಣಕ್ಕೆ ಆತನ ವಿರುದ್ಧ ಡಿಕ್ರಿ ಕೊಡುವದು ಸಾಧ್ಯವಿಲ್ಲವೆಂದೂ ತಿಳಿಸಿತು.

ಈ ತೀರ್ಪನ್ನು ಬ್ಯಾಂಕು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿತು. ಈ ವಿಷಯಕ್ಕೆ ಸಂಬಂಧಪಟ್ಟ ಈ ಹಿಂದಿನ ಅನೇಕ ತೀರ್ಪುಗಳನ್ನು ನ್ಯಾಯಾಲಯ ಪರಿಶೀಲಿಸಿತು.

---

## ಹದಿಹರೆಯದ ಗ್ರಾಮೀಣ ಬ್ಯಾಂಕುಗಳು

[7ನೇ ಪುಟದಿಂದ ಮುಂದುವರಿದುದು

ಯಿಂದ ಉಳಿಸಿ ಬೆಳೆಸಿಕೊಂಡು ಹೋಗಬೇಕು ಎನ್ನುವ ಕಳಕಳಿ ಇಲ್ಲವಾಗಿದೆ.

ಇನ್ನೊಂದು ಗ್ರಾಮಸ್ಥರ ಕೆಟ್ಟ ಪ್ರಭಾವ. ಯಾವುದಾದರೂ ಅಧಿಕಾರಿ-ಗುಮಾಸ್ತ, ಸಿಪಾಯಿಯೂ ಸಹ ಬಂದರೆ ಸಾಕು. ಅವರನ್ನು ಆದರಾತಿಥ್ಯಗಳೊಂದಿಗೆ ಸ್ವಾಗತಿಸುತ್ತಾರೆ. ಪುಕ್ಕಟೆ ಮನೆ, ಹಾಲು, ಮೊಸರು, ಕಾಯಿಪಲ್ಯ, ನೀರು, ಜೊತೆಗೆ ಸೇವೆಯೂ ಲಭ್ಯವಾಗುತ್ತದೆ. ದಾಕ್ಷಿಣ್ಯಕ್ಕೆ ಸಿಲುಕಿ ಅವರ ಸಂಬಂಧಿ, ಸ್ನೇಹಿತರುಗಳಿಗೆಲ್ಲ ಸಾಲ ನೀಡುವ ಕಾರ್ಯ ಸಲೀಸಾಗಿ ನಡೆಯುತ್ತೆ. ಸಾಲಕ್ಕಾಗಿ ಗ್ರಾಹಕರು ಬ್ಯಾಂಕನ್ನು ಬಿಟ್ಟು ಮಧ್ಯವರ್ತಿಗಳನ್ನು ಭೇಟಿ ಮಾಡುತ್ತಾರೆ. ರಾಜಕಾರಣಿಗಳು ಚುನಾವಣೆಯಲ್ಲಿ ಬೆಂಬಲ ನೀಡಿದವರಿಗೆ ಆಧಾರ ರಹಿತ ಸಾಲ ನೀಡಲು ಒತ್ತಾಯಿಸುತ್ತಾರೆ. ಅನೇಕ ವೇಳೆ ಇದು ಬ್ಯಾಂಕಿಂಗ್ ತತ್ವಕ್ಕೆ ವಿರೋಧವಾಗಿರುತ್ತದೆ. ರಾಜಕೀಯ ಉದ್ದೇಶ ತೀರಿಸಿಕೊಳ್ಳಲು ಮಾಡಿದ ಸಾಹಸವಾಗುತ್ತದೆ.

ಪಡೆದ ಸಾಲವನ್ನು ಮರುಪಾವತಿ ಮಾಡಬೇಕು ಎಂಬ ಮನೋಭಾವ ನಮ್ಮ ದೇಶದಲ್ಲಿನ ಗಣ್ಯನಾಗರಿಕರಲ್ಲಿ ಕಾಣುವದು ಕಡಿಮೆ ಎನಿಸುತ್ತದೆ. ಆಗರ್ಭ ಶ್ರೀಮಂತರೆಂದು ಕರೆಯಿಸಿಕೊಳ್ಳುವ ಮಹಾಸ್ವಾಮಿಗಳು, ಸಾಲಪಡೆದು ಗಳಿಸಿದ ವ್ಯಾಪಾರಿ, ನೌಕರಿ ಹಿಡಿದ ವಿದ್ಯಾರ್ಥಿ, ಬಾವಿಯ ನೀರುಕಂಡ ರೈತ–ಯಾರೂ ಸಾಲಮರುಪಾವತಿಯ ವಿಚಾರವನ್ನೇ ನೆನಪಿಗೆ ತಂದುಕೊಳ್ಳುವುದಿಲ್ಲ. ಯಾವಾಗಲೂ ಕ್ಷಾಮವಿದೆ. ಬಡ್ಡಿ ಮನ್ನಾ ಆಗಬೇಕು, ಮಳೆ ಬಂದಿಲ್ಲ. ನಮ್ಮ ವ್ಯವಹಾರ ಚೆನ್ನಾಗಿ ಆಗಿಲ್ಲ. ನಮಗೆ ಇನ್ನೂ ನೌಕರಿ ದೊರೆತಿಲ್ಲ (ದೊರೆತರೂ) ಎಂಬ ಸಬೂಬುಗಳ ಸುರಿಮಳೆ ಸುರಿಸಿ ತಮ್ಮ ಭಾಗದ ಮಾನ್ಯ ಶಾಸಕರುಗಳಿಗೆ ಮನವಿಪತ್ರ ಅರ್ಪಣೆ ಮಾಡುತ್ತಾರೆ ಸಾಲ ಮನ್ನಾ ಮಾಡುವದನ್ನು ಕೋರಿ. ಬ್ಯಾಂಕುಗಳು ಹಣ ಹುಟ್ಟಿಸುವ ಮನೆಗಳೆಂಬ ಭಾವನೆ ಅನೇಕರಿಗೆ.

ಅಂದರೆ ಅಧಿಕಾರಸ್ಥರ ಸವಲತ್ತು ಪಡೆದು ಬ್ಯಾಂಕು ದರೋಡೆ ನಡೆಸಿರುವ ಉದಾಹರಣೆಗಳನ್ನು ನಾವು ವೃತ್ತಪತ್ರಿಕೆಗಳಲ್ಲಿ ಓದುತ್ತೇವೆ. ಸುಶಿಕ್ಷಿತರ ಅಶಿಕ್ಷಿತತನ, ಎಂದರೆ ಸುಶಿಕ್ಷಿತರು ಅವ್ಯವಹಾರ್ಯವಾದ ಕಾರ್ಯಗಳಲ್ಲಿ ತೊಡಗುತ್ತಾರೆ. ಅಂದರೆ ಕಡಿಮೆ ಬಡ್ಡಿ ದರದಲ್ಲಿ ಬ್ಯಾಂಕಿನಿಂದ ಸಾಲ ಪಡೆದು ಹೆಚ್ಚಿನ ದರದಲ್ಲಿ ಖಾಸಗಿಯಾಗಿ ಸಾಲ ನೀಡುವರು. ಇದು ಸಕಾಲದಲ್ಲಿ ವಸೂಲಿ ಆಗದಿದ್ದರೆ ಬ್ಯಾಂಕಿಗೂ ಬಿಸಿ ತಗಲುತ್ತದೆ. ಅಲ್ಲದೆ ಅವರು ತಮ್ಮ ಹಣವನ್ನು ಬ್ಯಾಂಕಿನಲ್ಲಿ ಇಡುವದಿಲ್ಲ. ಹೀಗಾಗಿ ಬ್ಯಾಂಕುಗಳಿಗೆ ಈ ಮೂಲಕವೂ ನಷ್ಟ ಸಂಭವಿಸುತ್ತದೆ.

ಇವೆಲ್ಲವನ್ನು ಪರಿಹರಿಸಬೇಕಾದರೆ—

1 ಪ್ರಾಥಮಿಕ ತರಗತಿಗಳಿಂದಲೇ ಬ್ಯಾಂಕಿನ ಬಗ್ಗೆ (ಪ್ರಾಯೋಗಿಕ) ಅಭ್ಯಾಸ ಪ್ರಾರಂಭವಾಗಬೇಕು. ಕಿರಾಣಿ ಅಂಗಡಿಯಷ್ಟು ಸಲೀಸಾಗಿ ಅವುಗಳ ವ್ಯವಹಾರ ನಡೆಯಬೇಕು.

2 ಬ್ಯಾಂಕಿನ ಸಿಬ್ಬಂದಿಯಲ್ಲಿ ಹಣಕ್ಕಿಂತ ನಿಷ್ಠಾವಂತ ಸೇವೆ ಮುಖ್ಯ ಎಂಬ ಮಾನಸಿಕ ಕ್ರಾಂತಿಯನ್ನು ತರಬೇಕೆಂಬ ಭಾವನೆ ಮೂಡಿಸಬೇಕು.

3 ಸುಶಿಕ್ಷಿತರು ತಮ್ಮ ಮನಸ್ಸು ಬದಲಾಯಿಸಬೇಕು.

4 ನೀರಿನಲ್ಲಿ ದೋಣಿಯಿದ್ದರೂ ಅದರೊಳಗೆ ನೀರು ಬರುವುದಿಲ್ಲ, ಬರಬಾರದು. ಗ್ರಾಮಗಳಲ್ಲಿ ಸಿಬ್ಬಂದಿ ನೆಲಸಿ ಅಲ್ಲಿಯವರೊಡನೆ ಬೆರೆತರೂ ತಮ್ಮ ತತ್ವನಿಷ್ಠೆ ಬಿಡಬಾರದು. ಸರ್ಕಾರ ಅವರ ನೆಮ್ಮದಿಗೆ ಬೇಕಾದ ಎಲ್ಲ ವ್ಯವಸ್ಥೆ ಮಾಡಲು ಮರೆಯಬಾರದು.

5 ಈ ವಲಯದಲ್ಲಿ ರಾಜಕೀಯ ಪ್ರವೇಶಿಸದಂತೆ ಎಚ್ಚರಿಕೆ ವಹಿಸಬೇಕು.

6 ಗ್ರಾಹಕರು (ಫಲಾನುಭವಿಗಳು) ಉಪಕಾರಕ್ಕೆ ಪ್ರತಿ ಉಪಕಾರದ ನೀತಿ ಅನುಸರಿಸಿ ಬ್ಯಾಂಕಿನ ಸಾಲವನ್ನು ಸಕಾಲದಲ್ಲಿ ಮರಳಿಸಬೇಕು. 

ಅವಧಿ ಪರಿಮಿತಿ ಅಧಿನಿಯಮ, 1963 (Limitation Act, 1963)ರ ಪ್ರಕರಣ 19ರ ಪದಪ್ರಯೋಗವನ್ನು ಗಮನಿಸಿದರೆ, ಒಪ್ಪಿಗೆ ಪತ್ರಕ್ಕೆ ಸಹಿ ಮಾಡಿದ ಪಕ್ಷಕಾರ ಮಾತ್ರ ಬದ್ಧವಾಗಿರುತ್ತಾನೆ ಎಂಬುದನ್ನು ಸೂಚಿಸುತ್ತದೆ.

ಪಂಜಾಬ್ ಶ್ರೇಷ್ಠ ನ್ಯಾಯಾಲಯ ಹಜಾರ್ ಸಿಂಗ್ ಗುಜ್ಜಾರ್‌ಸಿಂಗ್, ವಿರುದ್ಧ ಬಕ್ಷೀರ್‌ಸಿಂಗ್ ಮೂಲಾಸಿಂಗ್ ವ್ಯಾಜ್ಯದಲ್ಲಿ, ಜಾಮೀನುದಾರ ಒಪ್ಪಿಗೆ ಪತ್ರಕ್ಕೆ ಸಹಿ ಮಾಡದೆ ಇದ್ದ ಪಕ್ಷದಲ್ಲಿ ಮೂಲ ಸಾಲಗಾರನಿಂದ ಸಹಿಮಾಡಲ್ಪಟ್ಟ ಒಪ್ಪಿಗೆ ಪತ್ರದ ಆಧಾರದ ಮೇಲೆ ಜಾಮೀನುದಾರನ ವಿರುದ್ಧ ಕ್ರಮ ಸಾಧ್ಯವಿಲ್ಲ ಎಂಬ ತೀರ್ಪನ್ನು ನೀಡಿತು.

ಅದೇ ರೀತಿ ಮದ್ರಾಸು ಉಚ್ಚನ್ಯಾಯಾಲಯವೂ ಭಾರತ ಕರಾರು ಅಧಿನಿಯಮ 1872ರ (Indian Contract Act, 1872) ಪ್ರಕರಣ 128ನ್ನು ಉದ್ಧರಿಸುತ್ತ, ಅದರಲ್ಲಿನ "Co-Extensive" (ಸಮವ್ಯಾಪಕ) ಎಂಬ ಪದ ವ್ಯಾಪ್ತಿಯ ಸೂಚಿಯಾದ್ದರಿಂದ ಅದು ಸಾಲದ ಪ್ರಮಾಣವನ್ನು ಮಾತ್ರ ಸೂಚಿಸುತ್ತದೆ ಎಂದು ನಿರ್ವಚನ ನೀಡಿತ್ತು (Interpreted).

ಈ ಹಿಂದೆ ಕರ್ನಾಟಕ ಉಚ್ಚ ನ್ಯಾಯಾಲಯವೂ ಹುಕುಮಚಂದ ಇನ್ಸುರೆನ್ಸ್ ಕಂ. ಲಿ. ವಿರುದ್ಧ ಬ್ಯಾಂಕ್ ಆಫ್ ಬರೋಡಾ ವ್ಯಾಜ್ಯದಲ್ಲಿ, ಈ ಮೇಲೆ ತಿಳಿಸಿದ ಪಂಜಾಬ್ ನ್ಯಾಯಾಲಯದ ಅಭಿಪ್ರಾಯವನ್ನೆ ಬೆಂಬಲಿಸಿ, ತೀರ್ಪು ನೀಡಿತ್ತು.

ಆದರೆ ಕೇರಳ ಉಚ್ಚನ್ಯಾಯಾಲಯ ವಾಂಡೂರ್ ಜ್ಯುಪಿಟರ್ಸ್ ಚಿಟ್ಸ್ (ಪ್ರೈ) ಲಿ. ವಿರುದ್ಧ ಕೆ. ಪಿ. ಮ್ಯಾಥ್ಯೂ ವ್ಯಾಜ್ಯದಲ್ಲಿ ನೀಡಿದ, ಜಾಮೀನುದಾರ ಒಪ್ಪಿಗೆ ಪತ್ರಕ್ಕೆ ಮೂಲ ಋಣಿಯ ಜೊತೆ ಸಹಿ ಮಾಡದಿದ್ದರೂ ಕೂಡ ಜಾಮೀನುದಾರ ಸಾಲಕ್ಕೆ ಹೊಣೆಗಾರನಾಗುತ್ತಾನೆ ಎಂಬ ತೀರ್ಪಿನ ಸರಿತನದ ಬಗ್ಗೆ ತನ್ನ ಸಂದೇಹ ವ್ಯಕ್ತಪಡಿಸಿ, ಅದನ್ನು ಒಪ್ಪಲಿಲ್ಲ.

ಅವಧಿ ಪರಿಮಿತಿ ಅಧಿನಿಯಮ, 1963ರ ಉಪಬಂಧಗಳನ್ನು (Provisions) ಮತ್ತು ಹೆಚ್ಚಿನ ನ್ಯಾಯಾಲಯಗಳು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಗಮನಿಸಿದಾಗ, ಕರ್ನಾಟಕ ಉಚ್ಚ ನ್ಯಾಯಾಲಯ ಈ ಕಾನೂನಿನ ಸರಿಯಾದ ಸ್ಥಿತಿಯನ್ನು ಹೇಳಿದೆ ಎನ್ನುವುದನ್ನು ಒಪ್ಪಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ, ಬ್ಯಾಂಕುಗಳು ಸಾಲಗಾರ/ಜಾಮೀನುದಾರರಿಂದ ತೆಗೆದುಕೊಳ್ಳುವ ಸಾಲ ದಸ್ತಾವೇಜುಗಳಲ್ಲೇ ಸೂಕ್ತವಾದ ಖಂಡವೊಂದನ್ನು (Clause) ಸೇರಿಸುವುದರ ಮೂಲಕ ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದೇನೋ ?

## ಮೋಸದ ಲಾಭ

ವ್ಯಕ್ತಿಯ ಅಕ್ರಮ ಕೃತ್ಯಗಳಿಗೆ ಕೊಡುವ ಮೇಲ್ಗೊಡುಗೆಯಾಗುವ ಕಾರಣಕ್ಕೋಸ್ಕರ, ಮೋಸದ ದೋಷವುಳ್ಳ ವ್ಯಕ್ತಿಗಳಾರೂ ಅನುಚಿತ ಲಾಭ ಪಡೆಯಲು ಅವಕಾಶವಿರಬಾರದೆನ್ನುವ ಮಹತ್ವದ ಸಿದ್ಧಾಂತವನ್ನು ಎತ್ತಿ ಹಿಡಿಯುವ ತೀರ್ಪೊಂದನ್ನು ಕೇರಳದ ಶ್ರೇಷ್ಠ ನ್ಯಾಯಾಲಯ 'ಬರೋಡಾ ಬ್ಯಾಂಕ್ ಯೂನಿಯನ್ ಕೊಚಿನ್ ವಿರುದ್ಧ ಬರೋಡಾ ಬ್ಯಾಂಕ್ ಮತ್ತು ಇತರರು' ನಿರ್ಣಯದಲ್ಲಿ ನೀಡಿದೆ.

ಕೆ. ನಾರಾಯಣನ್ ನಾಯರ್ ಎನ್ನುವವರು ಪದವೀಧರನಾಗಿದ್ದರೂ, ಆ ಸತ್ಯಾಂಶವನ್ನು ಬಚ್ಚಿಟ್ಟು, ಬೆರಳಚ್ಚುಗಾರ/ಗುಮಾಸ್ತ ಹುದ್ದೆಗೆ ಅರ್ಜಿ ಸಲ್ಲಿಸಿದ. ಮೇಲ್ಕಂಡ ಹುದ್ದೆಗಳಿಗೆ 'ಪದವೀಧರರಿಗಾಗಿ' ಮತ್ತು 'ಪದವೀಧರರಲ್ಲದವರಿಗೆ' ಎನ್ನುವ ಎರಡು ರೀತಿಯ ಸೇವಾ ಭರ್ತಿಯ ಕ್ರಮವಿತ್ತು. ಅರ್ಹತಾ ಪರೀಕ್ಷೆಗಳು ಕೂಡ ಈ ಎರಡು ಪ್ರತ್ಯೇಕ ವಿಭಾಗಗಳಿಗೆ ಭಿನ್ನವಾಗಿತ್ತು. ನಾರಾಯಣನ್ ನಾಯರ್‌ನನ್ನು ಸಹಜವಾಗಿಯೇ ಪದವೀಧರರಲ್ಲದವರಿಗಾಗಿ ಮೀಸಲಾದ ಪರೀಕ್ಷೆಗೆ ಒಳಪಡಿಸಲಾಗಿತ್ತು. ಆತ ಅದರಲ್ಲಿ ಆಯ್ಕೆಗೊಂಡು, ಆತನ ನೇಮಕಾತಿಯೂ ಆಯಿತು.

ಸುಮಾರು ಏಳು ವರುಷಗಳ ಅನಂತರ ಆತ, ತಾನು ನಿಜವಾಗಿಯೂ ಪದವೀಧರನಾಗಿರುವ ಕಾರಣಕ್ಕಾಗಿ, ಎರಡು ಹೆಚ್ಚಿನ ವೇತನ ಬಡ್ತಿ ಕೊಡುವಂತೆ ವಿನಂತಿಸಿಕೊಂಡ. ಆದರೆ, ಬ್ಯಾಂಕು ವಿದ್ಯಾ ಅರ್ಹತೆಯನ್ನು (educational qualification) ಬಚ್ಚಿಟ್ಟ ಕಾರಣಕ್ಕಾಗಿ ಆತನ ವಿರುದ್ಧ ಶಿಸ್ತು ಸಂಬಂಧದ ವ್ಯವಹಾರಗಳನ್ನು ಪ್ರಾರಂಭಿಸಿತು. ನಾಲ್ಕು ಹೆಚ್ಚಿನ ವೇತನ ಬಡ್ತಿಗಳನ್ನು ಸಂಚಿತವಾಗಿ ಜಾರಿಗೆ ಬರದಂತೆ ನಿಲ್ಲಿಸಿ, ಶಿಕ್ಷೆಯನ್ನು ವಿಧಿಸಲಾಯಿತು. ಆದಾಗ್ಯೂ ಪದವೀಧರರಿಗೆ ಇರುವ ಎರಡು ಹೆಚ್ಚಿನ ವೇತನ ಬಡ್ತಿಗಳನ್ನು ಆತನಿಗೆ ನೀಡಲಾಯಿತು.

ಈ ಎರಡು ಹೆಚ್ಚಿನ ವೇತನ ಬಡ್ತಿಗಳ ಕಾರಣದಿಂದ ಆತನ ಮೂಲ ವೇತನದಲ್ಲಿ ಹೆಚ್ಚಳವಾಗಿ, ಉಳಿದವರಿಗಿಂತ ಸೇವಾ ಜ್ಯೇಷ್ಠತೆಯನ್ನು ಸಾಧಿಸಿದ.

ನೌಕರರ ಯೂನಿಯನ್ ಇದನ್ನು ವಿರೋಧಿಸಿ, ನ್ಯಾಯಾಧಿಕರಣದೆದುರು ಔದ್ಯೋಗಿಕ ವಿವಾದವನ್ನು ಹೂಡಿತು. ನ್ಯಾಯಾಧಿಕರಣವು ಬ್ಯಾಂಕು ನೀಡಿದ ಎರಡು ಹೆಚ್ಚಿನ ವೇತನ ಬಡ್ತಿಗಳು ಕಾನೂನಿನ ದೃಷ್ಟಿಯಲ್ಲಿ ತಪ್ಪಾಗುವದರಿಂದ, ಅದನ್ನು ರದ್ದುಪಡಿಸಿತು. ಈ ತೀರ್ಪಿನ ವಿರುದ್ಧ ನಾರಾಯಣನ್ ನಾಯರ್ ರಿಟ್ ಅರ್ಜಿಯೊಂದನ್ನು ಕೇರಳದ ಶ್ರೇಷ್ಠ ನ್ಯಾಯಾಲಯದಲ್ಲಿ ಸಲ್ಲಿಸಿದ. ಏಕ ನ್ಯಾಯಾಧೀಶರು (single Judge) ನಾಯರನ ಪರವಾಗಿ ತೀರ್ಪಿತ್ತರು. ಅದರ ವಿರುದ್ಧವಾಗಿ ಮತ್ತೆ ಯೂನಿಯನ್ ರಿಟ್ ಅಪೀಲನ್ನು ಸಲ್ಲಿಸಿತು. ಅಪೀಲು ನ್ಯಾಯಾಲಯ ಏಕ ನ್ಯಾಯಾಧೀಶರ (single Judge) ತೀರ್ಪನ್ನು ರದ್ದುಪಡಿಸಿ, ತೀರ್ಪನ್ನು ನೀಡಿತು.

ಅಪೀಲು ನ್ಯಾಯಪೀಠ ನೀಡಿದ ತೀರ್ಪಿನಲ್ಲಿ ಕೆಲವು ಮಹತ್ವದ ಅಂಶಗಳು ಅಡಕವಾಗಿರುತ್ತವೆ. ನಾಯರನು ಸತ್ಯಾಂಶವನ್ನು ಬಚ್ಚಿಟ್ಟ ಸಂಗತಿ ಬ್ಯಾಂಕಿನ ಗಮನಕ್ಕೆ ಯಾವಾಗ ತಿಳಿಯಿತೋ, ತತ್‌ಕ್ಷಣ ಬ್ಯಾಂಕು ಆತನ ಸೇವೆಯನ್ನು ಮೊಟಕುಗೊಳಿಸಬೇಕಾಗಿತ್ತೆಂದು ಸ್ಪಷ್ಟವಾಗಿ ತಿಳಿಸಿತು. ಆತನ ನಿಜವಾದ ವಿದ್ಯಾ ಅರ್ಹತೆಯ (ಪದವೀಧರನಾಗಿರುವದರಿಂದ) ಕಾರಣಕ್ಕೆ ಆತ ಪದವೀಧರರಲ್ಲದವರ ವಿಭಾಗದಲ್ಲಿ ಸ್ಪರ್ಧಿಸಲು ಅರ್ಹತೆಯನ್ನು ಹೊಂದಿರುವದಿಲ್ಲ. ನ್ಯಾಯಾಲಯದ ಪ್ರಕಾರ, ಸೇವಾಭರ್ತಿಯ ಸಮಯದಲ್ಲಿ ಆ ಸತ್ಯಾಂಶವನ್ನು ಬಚ್ಚಿಟ್ಟ ಕಾರಣಕ್ಕಾಗಿ ಶಿಕ್ಷೆಯಾಗಿ ನಾಲ್ಕು ಹೆಚ್ಚುವರಿ ಬಡ್ತಿಗಳನ್ನು ನಿಲ್ಲಿಸಿದ್ದರೂ ಕೂಡ, ಪದವೀಧರರಿಗಾಗಿ ಇರಬಹುದಾದ ಎರಡು ಹೆಚ್ಚುವರಿ ವೇತನ ವೃದ್ಧಿಗಳನ್ನು ಪಡೆಯಲೂ ಆತನಿಗೆ ಹಕ್ಕಿರುವದಿಲ್ಲ. ಒಂದು ವೇಳೆ ಪದವೀಧರರಿಗಾಗಿ ಇರುವ ಹೆಚ್ಚುವರಿ ವೇತನ ವೃದ್ಧಿಗಳನ್ನು ನೀಡಿದ್ದಾದರೆ ಆತನ ಮೇಲೆ ವಿಧಿಸಿದ ಶಿಕ್ಷೆಯ ಉದ್ದೇಶವೇ ವಿಫಲವಾದಂತಾಗುತ್ತದೆ. ನಾಯರ್ ಮೋಸದ ದೋಷಿಯಾಗುವದರಿಂದಲೂ, ಪದವೀಧರನಲ್ಲದವನೊಬ್ಬನಿಗೆ ಲಭಿಸಬೇಕಾದ ಹುದ್ದೆಯನ್ನು ಗಿಟ್ಟಿಸಿ ಅನುಚಿತ ಲಾಭವನ್ನು ಪಡೆದ ಕಾರಣದಿಂದಲೂ, ಆತ ನಿಜವಾಗಿಯೂ ಶುದ್ಧ ಹಸ್ತಗಳಿಂದ ನ್ಯಾಯಾಲಯಕ್ಕೆ ಬಂದಿರುವನಲ್ಲವಾದ್ದರಿಂದ, ನ್ಯಾಯಾಲಯದ ಅಧಿಕಾರ ವ್ಯಾಪ್ತಿಯ ಅವಕಾಶವನ್ನು ಪಡೆಯಲು ಆತ ಅರ್ಹನಾಗಿರುವುದಿಲ್ಲ. ★

# ಬಳಕೆದಾರ ಉದರಿ ಮತ್ತು ಬ್ಯಾಂಕುಗಳು

**ಬಳಕೆದಾರ ಉದರಿ ಮತ್ತು ಬಳಕೆದಾರ ಸೇವೆಗಳಿಗೆ ಬ್ಯಾಂಕುಗಳು ನೀಡತೊಡಗಿರುವ ಒತ್ತನ್ನು ಗಮನಿಸಿದರೆ ಆಶ್ಚರ್ಯವಾಗುತ್ತದೆ. ಪ್ರತಿಯೊಬ್ಬ ಗ್ರಾಹಕನಲ್ಲೂ ಒಬ್ಬ ಬಳಕೆದಾರನನ್ನೂ, ಪ್ರತಿಯೊಬ್ಬ ಬಳಕೆದಾರನಲ್ಲೂ ಒಬ್ಬ ಗ್ರಾಹಕನನ್ನೂ ಬ್ಯಾಂಕುಗಳು ಇಂದು ಕಂಡುಕೊಳ್ಳುತ್ತಿವೆ.**

**ಬಿ. ಎಸ್. ಚಂದ್ರಶೇಖರ**
ಕ್ಷೇತ್ರಾಧಿಕಾರಿ
ಭಾರತೀಯ ಸ್ಟೇಟ್ ಬ್ಯಾಂಕ್
ರಾಯಚೂರು 584102

ಉತ್ಪಾದಕ ಚಟುವಟಿಕೆಗಳಿಗೆ ಮಾತ್ರ ಸಾಲ ನೀಡಬೇಕೆಂಬುದು ಬ್ಯಾಂಕುಗಳ ಸ್ವೀಕೃತ ನೀತಿ. ಅಂತೆಯೇ ಬ್ಯಾಂಕ್ ಉದರಿಯ ಬಹು ಪಾಲು ಕೃಷಿ ಹಾಗೂ ಕೈಗಾರಿಕೆಗೆ. ತಾನು ನೀಡಿದ ಉದರಿಯಿಂದ ಸಾಲಗಾರನ ಆದಾಯ ಹೆಚ್ಚಬೇಕು, ಹಾಗೆ ಹೆಚ್ಚಿದ ಆದಾಯದಿಂದ ಅವನು ಸಾಲವನ್ನು ಬಡ್ಡಿ ಸಹಿತ ಹಿಂದಿರುಗಿಸಬೇಕು ಎಂಬುದು ಬ್ಯಾಂಕುಗಳ ಉದರಿ ನೀತಿಯ ಮುಖ್ಯ ಅಂಶಗಳಲ್ಲಿ ಒಂದು. ಅಮೂಲ್ಯವಾದ ಉದರಿಯನ್ನು ಉತ್ಪಾದಕ ಕ್ಷೇತ್ರಗಳಿಗೆ ಮಾತ್ರ ಮೀಸಲಾಗಿಡಬೇಕೆಂಬ ನೀತಿಯ ಸತ್ಪರಿಣಾಮಗಳನ್ನು ಗುರುತಿಸುವುದು ಕಷ್ಟವೇನಲ್ಲ. ಆದರೆ ಎಲ್ಲ ವಿಚಾರಗಳಿಗೂ ವಿವಿಧ ಮಗ್ಗುಲುಗಳು ಇರುತ್ತವೆಯಷ್ಟೆ? ಆದ್ದರಿಂದ ವಿಭಿನ್ನ ದೃಷ್ಟಿಕೋನಗಳಿಂದ ಬ್ಯಾಂಕುಗಳ ಈ ಉದರಿ ನೀತಿಯನ್ನು ವಿಶ್ಲೇಷಿಸಿದಾಗ ಅರೆಕೊರೆಗಳು ಕಂಡರೆ ಆಶ್ಚರ್ಯಪಡಬೇಕಾಗಿಲ್ಲ.

ಭಾರತದ ಬ್ಯಾಂಕುಗಳು ಇಂದು ಮೇಲಿನ ವರ್ಗಗಳ ಸೇವೆಗೆ ಸೀಮಿತವಾದ ಸಂಸ್ಥೆಗಳಾಗಿ ಉಳಿದಿಲ್ಲ. ಬಡವರಲ್ಲಿ ಬಡವರನ್ನು ತಲುಪಬೇಕೆಂಬ ಮಟ್ಟಿಗೆ ಅವುಗಳ ಕಾರ್ಯನೀತಿಯಲ್ಲಿ ಮಹತ್ತರ ಬದಲಾವಣೆ ಉಂಟಾಗಿದೆ. ಸಮಾಜದ ವಿವಿಧ ವರ್ಗಗಳ ಉದರಿ ಬೇಡಿಕೆಗಳನ್ನು ಪೂರೈಸುವಲ್ಲಿ ಎಂಥ ಸಮಸ್ಯೆಗಳು ಎದುರಾದರೂ ಅಳುಕದೆ ಮುಂದೆ ಅಡಿಯಿಡುತ್ತಿರುವ ಬ್ಯಾಂಕುಗಳು ಇದೀಗ ಮಧ್ಯಮ ವರ್ಗಗಳಿಗೆ, ಮುಖ್ಯವಾಗಿ ವೇತನ ಪಡೆಯುವ ವರ್ಗಗಳಿಗೆ, ನೆರವಾಗಲು ಆಕರ್ಷಕ ಯೋಜನೆಗಳನ್ನು ಹಮ್ಮಿಕೊಳ್ಳುವಂತಾದದ್ದು ಸಹಜವೇ. ಹೀಗೆ ಮಧ್ಯಮ ವರ್ಗಗಳಿಗೆ ನೆರವಾಗುವಲ್ಲಿ ಬಳಕೆದಾರ ಉದರಿಯ ಪ್ರಾಮುಖ್ಯ ಇದೀಗ ಅಧಿಕಗೊಳ್ಳತೊಡಗಿದೆ.

## ಬಳಕೆದಾರ ಉದರಿ ಏಕೆ?

ಸ್ವಂತ ಉಪಯೋಗಕ್ಕಾಗಿ ವಾಹನ, ಶೀತೋಪಕರಣ, ದೂರದರ್ಶಕ, ರೆಫ್ರಿಜರೇಟರ್ ಮುಂತಾದುವನ್ನು ಕೊಳ್ಳುವುದಕ್ಕಾಗಿಯೊ, ಗೃಹ ನಿರ್ಮಾಣಕ್ಕಾಗಿಯೊ ಕೆಲವರ್ಷಗಳ ಹಿಂದೆ ಬ್ಯಾಂಕುಗಳಲ್ಲಿ ಸಾಲ ಕೇಳುವಂತೆಯೇ ಇರಲಿಲ್ಲ. ಇಂಥ 'ಅನುತ್ಪಾದಕ' ಉದ್ದೇಶಗಳಿಗಾಗಿ ಸಾಲ ನೀಡಬೇಕಾಗಿ ಬಂದ ಅಪರೂಪದ ಸಂದರ್ಭಗಳಲ್ಲಿ ಸಂಬಂಧಿಸಿದ ಬ್ಯಾಂಕರುಗಳನ್ನು ಪಾಪಪ್ರಜ್ಞೆ ಕಾಡಿರಬೇಕು! ಗೃಹನಿರ್ಮಾಣವನ್ನು ಉತ್ಪಾದಕ ಚಟುವಟಿಕೆ ಎಂದು ಭಾವಿಸಿದರೂ ಅದಕ್ಕೆ ಅಗತ್ಯವಾದ ದೀರ್ಘಾವಧಿ ಸಾಲಗಳನ್ನು ನೀಡುವುದು ಬ್ಯಾಂಕುಗಳ ಪದ್ಧತಿಯಾಗಿರಲಿಲ್ಲ.

ಇದೀಗ ಬ್ಯಾಂಕುಗಳ ಉದರಿ ನೀತಿ ಈ ನಿಟ್ಟಿನಲ್ಲಿ ಉದಾರವಾಗತೊಡಗಲು ಹಲವು ಕಾರಣಗಳನ್ನು ನೀಡಬಹುದು: ಉತ್ಪಾದನೆ ಅಧಿಕಗೊಳ್ಳಬೇಕೆಂಬುದು ಸರಿ. ಆದರೆ ನೇರವಾಗಿ ಉತ್ಪಾದನೆಗೇ ಹಣನೆರವು ನೀಡಿದರೆ ಸಾಕೆ? ಉತ್ಪಾದಿಸಿದ ಸಿದ್ಧ ಸರಕುಗಳು ಮಾರುಕಟ್ಟೆಯಲ್ಲಿ ಬಿಕರಿಯಾಗಬೇಕಷ್ಟೆ? ಹಾಗಾಗಲು ಬಳಕೆದಾರರ ಖರೀದಿ ಸಾಮರ್ಥ್ಯವೂ ಅಧಿಕಗೊಳ್ಳಬೇಕು. ಬಳಕೆದಾರರಿಗೆ ಉತ್ಪಾದಕರು, ಬಿಕರಿದಾರರು ಉದರಿ ನೀಡಬಹುದಾದರೂ ಬ್ಯಾಂಕುಗಳೂ ಉದರಿ ನೀಡಿದರೆ ತಪ್ಪೇನು?—ಎಂಬುದು ಹೊಸ ಆಲೋಚನೆ.

ಬ್ಯಾಂಕುಗಳು ಬಳಕೆದಾರ ಉದರಿಯನ್ನು ಹೆಚ್ಚಿಸಿದರೆ ವಿವಿಧ ಸಿದ್ಧ ಸರಕುಗಳ ಮಾರಾಟ ಚುರುಕುಗೊಂಡು ಉತ್ಪಾದಕ ಚಟುವಟಿಕೆಗಳು ತೀವ್ರಗೊಳ್ಳಬಹುದು. ಜೊತೆಗೆ ಉತ್ಪಾದಕರು (ವಿಕ್ರಯ ಅಭಿಕರಣಗಳ ಮೂಲಕ) ಬಳಕೆದಾರರಿಗೆ ನೀಡುವ ಉದರಿ ಬಹುಮಟ್ಟಿಗೆ ತಗ್ಗುತ್ತದೆ. ಸಂಬಂಧಿಸಿದ ಉತ್ಪನ್ನಗಳನ್ನು ತಯಾರಿಸುವ ಕೈಗಾರಿಕೆಗಳ ಉದರಿ ಬೇಡಿಕೆ ಅಷ್ಟರಮಟ್ಟಿಗೆ ಕಡಿಮೆಯಾಗುತ್ತದೆ. ಕೈಗಾರಿಕೆಗಳಿಗೆ ಉದರಿ ನೆರವು ಕಡಿಮೆ ಮಾಡಬೇಕೆಂಬ ಉದ್ದೇಶವೇನಿಲ್ಲದಿದ್ದರೂ ಪರೋಕ್ಷವಾಗಿ ಕೈಗಾರಿಕೆಗಳ ಉದರಿ ಹೊಣೆಯನ್ನು ಹಗುರಗೊಳಿಸುವ ಈ ಕ್ರಮ ಸ್ವಾಗತಾರ್ಹವೆನಿಸಿದ್ದರೆ ತಪ್ಪಲ್ಲ. ಅಲ್ಲದೆ ಅಸ್ವಸ್ಥ ಕೈಗಾರಿಕೆಗಳಲ್ಲಿ ಸ್ಥಗಿತಗೊಂಡ ಬ್ಯಾಂಕ್ ಉದರಿಯ ಮೊತ್ತವೇನೂ ಕಡಿಮೆಯಲ್ಲ. ಬಳಕೆದಾರ ಉದರಿಯನ್ನು ಪ್ರೋತ್ಸಾಹಿಸುವುದರಿಂದ ಈ ನಷ್ಟಸಂಭಾವ್ಯತೆಯ ಅಂಶ ಕಿಂಚಿತ್ತಾದರೂ ಕಡಿಮೆಯಾದೀತೆಂದು ನಂಬಬಹುದು.

## ಕೊನೆಗೊಂಡ ವಿಪರ್ಯಾಸ

ಬಳಕೆದಾರ ಉದರಿಯನ್ನು ತೀವ್ರಗೊಳಿಸಬಯಸುವ ಬ್ಯಾಂಕುಗಳ ನಿಲುವಿಗೆ ಇನ್ನೊಂದು ಪ್ರೇರಣೆಯೂ ಇದ್ದೀತು. ಭದ್ರತೆಯ ಭೂತ ಬಿಟ್ಟು ಕನಿಷ್ಠ ಆದಾಯವುಳ್ಳ ದುರ್ಬಲ ವರ್ಗಗಳಿಗೆ ಗಣನೀಯ ಮೊತ್ತದ ಸಾಲಗಳನ್ನು ನೀಡಿದ ಅನುಭವ ಈ ದಶಕದಲ್ಲಿ ಬ್ಯಾಂಕುಗಳಿಗೆ ಚೆನ್ನಾಗಿದೆ. ಈ ಅನುಭವದ ಸಿಹಿ ಕಹಿಗಳು ಮಧ್ಯಮ ವರ್ಗದತ್ತ ಬ್ಯಾಂಕುಗಳು ಕಣ್ಣು ಹೊರಳಿಸುವಂತೆ ಮಾಡಿರಬಹುದು. ಸಾಪೇಕ್ಷವಾಗಿ ಹೆಚ್ಚು ಭದ್ರತೆಯುಳ್ಳ ಈ ಸಾಲಗಳು ಹೆಚ್ಚಿನ ಆದಾಯವನ್ನು ತರುತ್ತವೆ. ಬ್ಯಾಂಕುಗಳ ಬಳಕೆದಾರ ಉದರಿಗೆ ಶೇ. 15ರಿಂದ ಶೇ. 16.5 ಬಡ್ಡಿ ಇರುತ್ತದೆ.

ಆದಾಯವೇ ಇಲ್ಲದ ನಿರ್ಗತಿಕರಿಗೆ ಸಾಲ ನೀಡಲು ಉತ್ಸಾಹಿಸುವ ಬ್ಯಾಂಕುಗಳು ಒಳ್ಳೆಯ ಸಂಬಳ ಪಡೆಯುವವರ ಉದರಿ ಅಗತ್ಯಗಳಿಗೆ ಬಹುಕಾಲ ಸ್ಪಂದಿಸದೆ ಹೋದದ್ದು ವಿಪರ್ಯಾಸ. ಈ ವಿಪರ್ಯಾಸವನ್ನು ಕೊನೆಗೊಳಿಸಲು ಬ್ಯಾಂಕುಗಳು ಬಳಕೆದಾರ ಉದರಿಯನ್ನು ಉತ್ತೇಜಿಸುವುದರ ಮೂಲಕ ಮುಂದಾಗಿವೆಯೆಂದೂ ಭಾವಿಸಬಹುದು.

## ಬದಲಾದ ಒತ್ತು

ಬಳಕೆದಾರ ಉದರಿ ಮತ್ತು ಬಳಕೆದಾರ ಸೇವೆಗಳಿಗೆ ಬ್ಯಾಂಕುಗಳು ನೀಡತೊಡಗಿರುವ ಒತ್ತನ್ನು ಗಮನಿಸಿದರೆ ಆಶ್ಚರ್ಯವಾಗುತ್ತದೆ. ಕೆಲವು ಬ್ಯಾಂಕುಗಳ ಕೇಂದ್ರ ಕಛೇರಿಗಳಲ್ಲಿ ಬಳಕೆದಾರ ಸೇವಾ ವಿಭಾಗಗಳು ಆರಂಭವಾಗಿವೆ. ಪ್ರತಿಯೊಬ್ಬ ಗ್ರಾಹಕನಲ್ಲೂ ಒಬ್ಬ ಬಳಕೆದಾರನನ್ನು ಮತ್ತು ಪ್ರತಿಯೊಬ್ಬ ಬಳಕೆದಾರನಲ್ಲೂ ಒಬ್ಬ ಗ್ರಾಹಕನನ್ನು ಕಂಡು

ಕೊಳ್ಳುವ ಎಚ್ಚರ ಇಂದು ವ್ಯಾಪಕವಾಗಿದೆ. ಬಳಕೆದಾರ ಉದರಿಯನ್ನು ಪ್ರೋತ್ಸಾಹಿಸುವಲ್ಲಿ ಬ್ಯಾಂಕುಗಳು ಹುರುಪಿನಿಂದ ಪೈಪೋಟಿ ನಡೆಸಿವೆ. ವಿವಿಧ ಆಕರ್ಷಕ ಯೋಜನೆಗಳು ರೂಪುಗೊಳ್ಳುತ್ತಿವೆ. ಅವುಗಳಲ್ಲಿ ಮುಖ್ಯವಾದ ಕೆಲವು ಪ್ರಕಾರಗಳನ್ನು ಗುರುತಿಸಬಹುದು :

(1) ಉದರಿ ಕಾರ್ಡು
(2) ಠೇವಣಿ ಲಿಂಕಿನ (deposit linked) ಬಳಕೆ ಸಾಲದ ಯೋಜನೆ ಮತ್ತು
(3) ಉಪಭೋಗ ವಸ್ತು ಖರೀದಿಗೆ ನೇರ ಸಾಲ.

## ಉದರಿ ಕಾರ್ಡು

ಕೆನರಾ ಬ್ಯಾಂಕಿನ ಕ್ಯಾನ್‌ಕಾರ್ಡ್, ಭಾರತೀಯ ಸ್ಟೇಟ್ ಬ್ಯಾಂಕಿನ ಬ್ಯಾಂಕಾರ್ಡ್ ಮತ್ತು ಇತರ ಕೆಲವು ಬ್ಯಾಂಕುಗಳ ಉದರಿ ಕಾರ್ಡುಗಳು ಪ್ರಚಲಿತವಾಗುತ್ತಿವೆ. ಹಣದ ಎಲ್ಲ ಅನುಕೂಲತೆಗಳನ್ನು ಹೊಂದಿರುವುದೇ ಅಲ್ಲದೆ ಎಲ್ಲ ಅನಾನುಕೂಲತೆಗಳನ್ನೂ ನಿವಾರಿಸುವುದೆನ್ನಲಾದ ಉದರಿ ಕಾರ್ಡುಗಳು ನಿಧಾನವಾಗಿಯಾದರೂ ಪಟ್ಟಣವಾಸಿಗಳಲ್ಲಿ ಹೆಚ್ಚು ಜನಪ್ರಿಯವಾಗಬಹುದು. ಬ್ಯಾಂಕು ನೀಡಿದ ಉದರಿ ಕಾರ್ಡು ತೋರಿಸಿ ದೇಶಾದ್ಯಂತ ನಿಗದಿತವಾದ ಸಹಸ್ರಾರು ಕೇಂದ್ರಗಳಲ್ಲಿ ಎಲ್ಲಿಯೇ ಆದರೂ ನಗದು ಹಣದ ನೆರವಿಲ್ಲದೆ ವಿವಿಧ ಸೇವೆಗಳನ್ನು ಪಡೆಯಬಹುದು. ಇಂಥ ಬ್ಯಾಂಕ್ ಕಾರ್ಡುದಾರರಾಗಲು ಅರ್ಹತೆಯೆಂದರೆ ಆ ಬ್ಯಾಂಕಿನಲ್ಲಿ 5 ಅಥವಾ 10 ಸಾವಿರ ರೂಪಾಯಿ ಠೇವಣಿ ಇರಿಸಿರುವುದು ಅಥವಾ ಅಷ್ಟು ಮೌಲ್ಯದ ಮೀರೆಳತದ ಮಿತಿ ಪಡೆದಿರುವುದು.

ಇದೀಗ ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರು ಒಂದು ಕುತೂಹಲಕಾರಿ ಯೋಜನೆಯನ್ನು ತರುವ ಇಂಗಿತ ವ್ಯಕ್ತಪಡಿಸಿದ್ದಾರೆ. ಎಲ್ಲ ರೀತಿಯ ಬಳಕೆ ವಸ್ತುಗಳೂ ಲಭ್ಯವಿರುವ 'ಮಾರುಕಟ್ಟೆ ಸಂಕೀರ್ಣ'ವೊಂದನ್ನು ಬ್ಯಾಂಕಿನ ವತಿಯಿಂದ ಸ್ಥಾಪಿಸುವುದು ಮತ್ತು ಅಲ್ಲಿ ಬಳಸಲಾಗುವಂಥ ಉದರಿ ಕಾರ್ಡುಗಳನ್ನು ನೀಡುವುದು ಯೋಜನೆಯ ಉದ್ದೇಶ. ನಗದು ಬಳಕೆಯಿಲ್ಲದೆ ಎಲ್ಲ ಖರೀದಿಗಳನ್ನೂ ಒಂದೇ ಎಡೆಯಲ್ಲಿ ನಡೆಸುವುದು ಸಾಧ್ಯವಾಗಬೇಕೆಂಬ ಆಶಯವುಳ್ಳ ಈ ಯೋಜನೆಗೆ ಅನಿವಾಸಿ ಭಾರತೀಯರಿಂದ ಹಣ ವಿನಿಯೋಜನೆ ಮಾಡಿಸುವ ಆಲೋಚನೆ ಇದೆಯೆನ್ನಲಾಗಿದೆ.

ಬ್ಯಾಂಕರರ ಆಲೋಚನೆ ಹರಿಯುತ್ತಿರುವ ದಿಕ್ಕನ್ನು ಇದು ಸೂಚಿಸುತ್ತದೆ. ಉದರಿ ಕಾರ್ಡುಗಳ ಉಪಯೋಗ ಸಾಧಾರಣವಾಗಿ ಮೇಲಣ ವರ್ಗಗಳಿಗೆ ಸೀಮಿತವಾಗಬಹುದು. ಆದರೂ ಮಾರಾಟ ಪ್ರತಿನಿಧಿಗಳೇ ಮುಂತಾದ ಪ್ರವಾಸ ನಿರತ ಉದ್ಯೋಗಿಗಳಿಗೂ ಇದು ಅನುಕೂಲಕರ. ಕ್ರಮೇಣ ಹೆಚ್ಚು ಹೆಚ್ಚು ಜನರು ಇದನ್ನು ಬಳಸತೊಡಗುವರೇ ಎಂಬುದನ್ನು ಕಾದು ನೋಡಬೇಕು. ಸದ್ಯಕ್ಕಂತೂ ಅಂಥ ನಿರೀಕ್ಷೆ ಇಲ್ಲ.

## ಠೇವಣಿ ಜೋಡಣೆಯ ಬಳಕೆ ಸಾಲ

ಬಳಕೆದಾರ ಉದರಿಯನ್ನು ಪ್ರೋತ್ಸಾಹಿಸಬೇಕೆಂಬ ಉದ್ದೇಶವೇನೋ ಒಳ್ಳೆಯದು. ಫಲಾನುಭವಿಗಳನ್ನು ಆಯುವುದು ಹೇಗೆ? ಎಲ್ಲರೂ ಬಳಕೆದಾರರಾಗಬಹುದಷ್ಟೆ? ಫಲಾನುಭವಿಗಳ ಆಯ್ಕೆಯಲ್ಲಿ ಗಣಿಸಬೇಕಾದ ಬಹು ಮುಖ್ಯ ಅಂಶವೆಂದರೆ ಅವರ ಮರುಪಾವತಿ ಸಾಮರ್ಥ್ಯ. ಆದ್ಯತಾ ವಲಯಗಳಾದರೆ ಮರುಪಾವತಿಯ ಸಂಭಾವ್ಯತೆ ಕೊಂಚ ಕಮಿಯೇ ಆದರೂ ಅದು 'ಆದ್ಯತ'ವಾಗಿರುವುದರಿಂದ ಪರೋಕ್ಷ ಲಾಭವಾದರೂ ಇರುತ್ತದೆ. ಆದರೆ ಬಳಕೆ ಸಾಲದ ವಿಷಯದಲ್ಲಿ ಹಾಗಲ್ಲ. ಉದರಿಯ ಬಳಕೆಯಿಂದ ಇಲ್ಲ ಆದಾಯ ಹೆಚ್ಚುವುದಿಲ್ಲ. ಆದ್ದರಿಂದ (1) ವ್ಯಕ್ತಿಯ (ಮಾಸಿಕ ವಾರ್ಷಿಕ) ಆದಾಯ, (2) ವ್ಯಕ್ತಿಯ ಉಳಿತಾಯ ಇವುಗಳ ಆಧಾರದಿಂದಲೇ ಮರುಪಾವತಿ ಸಾಮರ್ಥ್ಯವನ್ನು ಗ್ರಹಿಸಬೇಕಾದ ಅನಿವಾರ್ಯತೆ ಬ್ಯಾಂಕರುಗಳಿಗೆ ಒದಗುತ್ತದೆ.

ಈ ದಿಸೆಯಲ್ಲಿ ಬ್ಯಾಂಕುಗಳಿಗೆ ತೋಚಿದ ಸುಲಭ ಯೋಜನೆಯೆಂದರೆ ಠೇವಣಿಗೆ ಜೋಡಿಸಿಕೊಂಡ ಬಳಕೆ ಸಾಲ. ವ್ಯಕ್ತಿಯೊಬ್ಬ ಒಂದು ನಿಶ್ಚಿತ ಅವಧಿಗೆ ಒಂದು ನಿರ್ದಿಷ್ಟ ಕಂತಿನ ಆವರ್ತಕ ಠೇವಣಿ ಖಾತೆಯನ್ನು ತೆರೆಯುತ್ತಾನೆ. ಪ್ರತಿ ತಿಂಗಳೂ ಒಪ್ಪಿಗೆಯಾದ ಮೊತ್ತವನ್ನು ಆ ಖಾತೆಯಲ್ಲಿ ಜಮೆ ಮಾಡುತ್ತಾನೆ. ನಿಶ್ಚಿತ ಅವಧಿಯ ಅಂತ್ಯದಲ್ಲಿ ಬಡ್ಡಿಯೂ ಸೇರಿದಂತೆ ಒಂದು ಮೊತ್ತ ಸಂಗ್ರಹವಾಗುತ್ತದೆ. ಈ ಮೊತ್ತದ ಗಾತ್ರವನ್ನು ಆಧರಿಸಿ ಬ್ಯಾಂಕು ಬಳಕೆಸಾಲ ನೀಡುವುದು. ಆವರ್ತ ಠೇವಣಿಯಲ್ಲಿ ಸಂಗ್ರಹವಾದ ಮೊತ್ತದೊಂದಿಗೆ ಈ ಸಾಲದ ಹಣವನ್ನೂ ಸೇರಿಸಿ, ಉದ್ದೇಶಿತ ವಸ್ತುವನ್ನು ಖರೀದಿಸಬಹುದು. ಆವರ್ತ ಠೇವಣಿಗೆ ಸಮನಾದ ಮೊತ್ತದ ಮಾಸಿಕ ಕಂತುಗಳಲ್ಲಿ ಸಾಲವನ್ನು ಬಡ್ಡಿಯೊಂದಿಗೆ ಮರುಪಾವತಿ ಮಾಡುವ ಸೌಲಭ್ಯವಿರುತ್ತದೆ.

ಒಂದು ನಿದರ್ಶನದಿಂದ ಇದನ್ನು ಸ್ಪಷ್ಟಪಡಿಸಬಹುದು. ಒಬ್ಬರು ರೂ 6,400 ಬೆಲೆಯ ರೆಫ್ರಿಜಿರೇಟರ್ ಒಂದನ್ನು ಕೊಳ್ಳಬಯಸುತ್ತಾರೆನ್ನೋಣ. ಬ್ಯಾಂಕಿನಲ್ಲಿ ಮೇಲೆ ತಿಳಿಸಿದ ಯೋಜನೆಯಡಿ 1 ವರ್ಷದ ಅವಧಿಗೆ ತಿಂಗಳಿಗೆ ರೂ 250 ಕಂತು ನೀಡುವ ಆವರ್ತಕ ಠೇವಣಿ ಖಾತೆಯನ್ನು ಅವರು ತೆರೆಯುತ್ತಾರೆ. 12 ತಿಂಗಳು ಸಂಗ್ರಹವಾದ ಮೊಬಲಗಾದ ರೂ 3,000ದೊಂದಿಗೆ ಬಡ್ಡಿ (ಅಂದಾಜು) ರೂ 200 ಸೇರಿ ರೂ 3,200 ಆಗುತ್ತದೆ. ಬ್ಯಾಂಕು ಈ ರೂ 3,200ನ್ನು ನೀಡುವುದರ ಜತೆಗೆ ಅದೇ ಮೊತ್ತದ ಹಣವನ್ನು ಅವರಿಗೆ ಸಾಲವಾಗಿ ನೀಡಿ ಅವರು ರೆಫ್ರಿಜಿರೇಟರು ಕೊಳ್ಳಲು ನೆರವಾಗುತ್ತದೆ. ಮುಂದೆ ರೂ 250ರ ಮಾಸಿಕ ಕಂತುಗಳನ್ನು ಮುಂದುವರಿಸುತ್ತಾ, ಅವರು ಬ್ಯಾಂಕಿನ ಸಾಲವನ್ನು (ಶೇ. 15 ಅಥವಾ ಶೇ. 16.5) ಬಡ್ಡಿಯೊಂದಿಗೆ ತೀರಿಸುತ್ತಾರೆ.

ನಿರ್ದಿಷ್ಟ ಮಾಸಿಕ ಉಳಿತಾಯವಿರುವ ಎಲ್ಲ ವ್ಯಕ್ತಿಗಳೂ ಈ ಯೋಜನೆಯ ಲಾಭ ಪಡೆಯಬಹುದು. ತಾವು ಖರೀದಿಸಬೇಕೆಂದಿರುವ ವಸ್ತುಗಳನ್ನು ಆವರ್ತಕ ಠೇವಣಿ ಖಾತೆ ತೆರೆಯುವಾಗಲೇ ಸ್ಪಷ್ಟಪಡಿಸಬೇಕಾದ್ದು ಅಗತ್ಯ. ಕೊಂಡ ವಸ್ತುಗಳಿಗೆ ಬ್ಯಾಂಕಿನ ನಿಯಮದಂತೆ ವಿಮೆ ಮಾಡಿಸುವ ಖರ್ಚನ್ನು ಸಾಲಗಾರರೇ ಭರಿಸಬೇಕಾಗುತ್ತದೆ.

ಬ್ಯಾಂಕುಗಳಿಗೆ ಈ ಯೋಜನೆಯಿಂದ ಠೇವಣಿ ಸಂಗ್ರಹಣೆಯೂ ಆಗುತ್ತದೆ. ಅಲ್ಲದೆ ಸಾಲಗಾರನ ಮರುಪಾವತಿ ಸಾಮರ್ಥ್ಯ ಮೊದಲೇ ಸಾಬೀತಾಗಿರುವುದರಿಂದ ಸಾಲದ ಭದ್ರತೆ ಕುರಿತು ಬ್ಯಾಂಕು ಆತಂಕ ತೋರುವ ಪ್ರಮೇಯ ಇರಲಾರದು.

## ನೇರ ಸಾಲ

ಈ ಮೊದಲು ಹೇಳಿದ ರೀತಿಯ ಯೋಜನೆಯಲ್ಲಿ ಸಾಲ ದೊರೆಯುವುದು ಒಂದು ನಿರ್ದಿಷ್ಟ ಅವಧಿಯವರೆಗೂ (ಆವರ್ತ ಠೇವಣಿಯಲ್ಲಿ) ಉಳಿತಾಯ ಮಾಡಿದರೆ ಮಾತ್ರ. ಯೋಜಿತ ಖರೀದಿಯನ್ನು ತತ್‌ಕ್ಷಣ ಮಾಡಲು ಅನುಕೂಲವಾಗುವಂಥ ಯೋಜನೆಗಳೂ ಇವೆ. 'ಬೃಹತ್ ಖರೀದಿ ಯೋಜನೆ' ಮುಂತಾದ ಹೆಸರುಗಳಿಂದ ಈ ಯೋಜನೆಗೆ ಪ್ರಚಾರ ನೀಡಲಾಗುತ್ತಿದೆ. ಇದು ಮುಖ್ಯವಾಗಿ ಸರಕಾರಿ ಉದ್ಯೋಗಿಗಳಿಗೆ, ಸಾರ್ವಜನಿಕ ವಲಯದ ಉದ್ಯೋಗಿಗಳಿಗೆ ಮತ್ತು ವೈದ್ಯರೇ ಮೊದಲಾದ ವೃತ್ತಿಪರರಿಗೆ ನೆರವಾಗುವಂಥದು. ಇಲ್ಲಿ ಸಾಲ ಪಡೆಯಲು ಇಚ್ಛಿಸುವವರ ನಿವ್ವಳ ಮಾಸಿಕ ಆದಾಯ ರೂ 2,000 ಆದರೂ ಇರಬೇಕು. ಅವರ ವೇತನದಿಂದ ಕಂತುಗಳನ್ನು ಬ್ಯಾಂಕಿಗೆ ನೀಡುವ ಬಗ್ಗೆ ಉದ್ಯೋಗದಾತರಿಂದ ಒಪ್ಪಿಗೆ ಪತ್ರ ಸಲ್ಲುವಂತೆ ಮಾಡುವುದು ಅಥವಾ ಬ್ಯಾಂಕಿಗೆ ಒಪ್ಪಿಗೆಯಾಗುವ ವ್ಯಕ್ತಿಯೊಬ್ಬರು ಖಾತರಿ ನೀಡುವುದು ಅಗತ್ಯವಾಗಬಹುದು. ಖರೀದಿಸಲು ಉದ್ದೇಶಿಸಿದ ವಸ್ತುಗಳ ಶೇ. 70ರಷ್ಟಕ್ಕೆ ಹಣವನ್ನು ಸಾಮಾನ್ಯವಾಗಿ ಬ್ಯಾಂಕುಗಳು ಸಾಲ ನೀಡುವುದಾದರೂ ಸಾಲದ ಗರಿಷ್ಠ ಮೊತ್ತವನ್ನು ರೂ 1 ಲಕ್ಷ ಅಥವಾ ನಿವ್ವಳ ವೇತನದ 8ರಷ್ಟು —ಇವುಗಳಲ್ಲಿ ಯಾವುದು ಕಡಿಮೆಯೋ ಅದಕ್ಕೆ— ಮಿತಿಗೊಳಿಸಲಾಗಿದೆ. 3ರಿಂದ 5 ವರ್ಷಗಳ ವರೆಗಿನ ಅವಧಿಯಲ್ಲಿ ಸಾಲ ಮರುಪಾವತಿ ಮಾಡಲು ಅನುವಾಗುವ ಸುಲಭ ಕಂತುಗಳಿರುತ್ತವೆ. ಬಡ್ಡಿಯ ದರ, ಅಲ್ಪಾವಧಿ ಸಾಲವಾದರೆ (36 ತಿಂಗಳ ವರೆಗೆ) ಶೇ. 16.5; ದೀರ್ಘಾವಧಿಯಾದರೆ ಶೇ. 15. ಈ ಯೋಜನೆಯಲ್ಲಿ ಕಾರು ಮುಂತಾದ

# ಗ್ರಾಮೀಣ ವಲಯಕ್ಕೆ ವಿಶೇಷ ಠೇವಣಿ ಯೋಜನೆಗಳು

**ಈಗಿನ ಸಂದಿಗ್ಧ ಸಮಯದಲ್ಲಿ ಬ್ಯಾಂಕುಗಳು ತಮ್ಮ ಠೇವಣಿ ಯೋಜನೆಗಳನ್ನು ಪುನರ್ವಿಮರ್ಶಿಸಿಕೊಳ್ಳಬೇಕಾಗಿದೆ. ಗ್ರಾಮೀಣ ವಲಯಕ್ಕೆ ಹೆಚ್ಚಿನ ಗಮನ ನೀಡಬೇಕಾದ ಕಾಲವೀಗ ಬಂದಿದೆ.**


## ಡಿ. ವೈ. ಲಿಂಗಧಾಳ

**ಮೈಸೂರು ಬ್ಯಾಂಕ್**
**ಬೆಂಗಳೂರು ಶಾಖೆ**


ಭಾರತದೇಶದಲ್ಲಿ ಗ್ರಾಮೀಣ ವಲಯದ ವಿಸ್ತಾರ ಅಪಾರ. ದೇಶದ ಆರ್ಥಿಕ ಪ್ರಗತಿಯಲ್ಲಿ ಗ್ರಾಮೀಣ ವಲಯದ ಪಾತ್ರ ಅತಿ ಮುಖ್ಯ. ಈ ಶತಮಾನದ ಬ್ಯಾಂಕಿಂಗ್ ಉದ್ಯಮದಲ್ಲಿ ಇತ್ತೀಚಿನ ಒಂದೆರಡು ದಶಕಗಳನ್ನು ಹೊರತುಪಡಿಸಿ ಗ್ರಾಮೀಣ ವಲಯವನ್ನು ಬ್ಯಾಂಕುಗಳು ಹೆಚ್ಚಾಗಿ ಗಮನಕ್ಕೆ ತೆಗೆದುಕೊಂಡಿಲ್ಲ. ಸಂಪನ್ಮೂಲಗಳ ಆಗರವಾದ ಈ ವಿಶಾಲವಾದ ಗ್ರಾಮೀಣ ವಲಯದ ಬಹುಸಂಖ್ಯಾತ ಗ್ರಾಹಕರನ್ನು ಹೊಂದಿರುವ ಬ್ಯಾಂಕುಗಳು ದೇಶದ ಗ್ರಾಮೀಣ ವಲಯದತ್ತ ಮತ್ತೊಮ್ಮೆ ವಿಶೇಷವಾಗಿ ಗಮನ ಹರಿಸಬೇಕಾಗಿದೆ.

### ಅಲಕ್ಷ್ಯ

ಠೇವಣಿ ಅನ್ನುವ ಪದ ಇತ್ತೀಚೆಗೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಸಂಪನ್ಮೂಲಗಳ ಕ್ರೋಡೀಕರಣ, ಬಂಡವಾಳ ಹೂಡಿಕೆ, ರಾಷ್ಟ್ರೀಯ ಸಾಮಾಜಿಕ ಜವಾಬ್ದಾರಿ ಹಾಗೂ ಬದಲಾಗುತ್ತಿರುವ ಪರಿಸರಕ್ಕೆ ಪೂರಕವಾಗಿ ಬ್ಯಾಂಕುಗಳು ಠೇವಣಿ ಯೋಜನೆಗಳನ್ನು ರೂಪಿಸಿ

## ಬಳಕೆದಾರ ಉದರಿ ಮತ್ತು ಬ್ಯಾಂಕುಗಳು

ವಾಹನಗಳನ್ನು ಕೊಳ್ಳಬಹುದೆಂದು ಬ್ಯಾಂಕುಗಳ ಜಾಹೀರಾತು ಸೂಚಿಸಿದರೂ ಲಭಿಸುವ ಗರಿಷ್ಠ ಮೊತ್ತವನ್ನು ಗಮನಿಸಿದರೆ ಅದು ಸಾಧ್ಯವಾಗದು. ಇತರ ಅನೇಕ ವಸ್ತುಗಳೊಂದಿಗೆ ಗೃಹ ಗಣಕಗಳ ಖರೀದಿಗೂ ಸಾಲ ಸಿಗುತ್ತದೆ.

ಬ್ಯಾಂಕುಗಳು ಸಾಲ ನೀಡಲು ಮುಂದಾಗಿರುವ ಇನ್ನೆರಡು ಕ್ಷೇತ್ರಗಳೆಂದರೆ ಗೃಹನಿರ್ಮಾಣ ಮತ್ತು ಶಿಕ್ಷಣ. ಇವು ದೀರ್ಘಕಾಲಿಕ ಸಾಲಗಳು. ಇವನ್ನು ಬಳಕೆ ಸಾಲಗಳು ಎನ್ನಲಾಗದು. ಆದರೂ ಮಧ್ಯಮ ವರ್ಗದ ಖರೀದಿ ಸಾಮರ್ಥ್ಯವನ್ನು ವಿಸ್ತರಿಸುವಲ್ಲಿ ಇಂಥ ಸಾಲಗಳು ಪರೋಕ್ಷವಾಗಿ ನೆರವಾಗುವುವು.

### ಅನುಕೂಲತೆ—ಆತಂಕ

ಬ್ಯಾಂಕುಗಳ ಬಳಕೆ ಉದರಿಯಿಂದ ಸಾರ್ವಜನಿಕರಿಗೆ ಒದಗುವ ಅನುಕೂಲತೆಗಳು ಸ್ಪಷ್ಟವಾಗಿಯೇ ಇವೆ. ಉದರಿ ಕಾರ್ಡುಗಳು ಪಟ್ಟಣವಾಸಿಗಳಲ್ಲಿ, ಅದರಲ್ಲೂ ಪ್ರತಿಷ್ಠಿತ ಮೇಲಣ ವರ್ಗಗಳಲ್ಲಿ ಮಾತ್ರ, ಬಳಕೆಯಾಗಬಹುದು. ಉಳಿದವರಿಗೆ ಅಂಥ ಉಪಯೋಗವೇನಿಲ್ಲ. ನೇರ ಸಾಲಗಳು ಹೆಚ್ಚು ಆಕರ್ಷಕವಾಗಿವೆ. ಇಚ್ಛಿಸಿದ ವಸ್ತುಗಳನ್ನು ಉಳಿತಾಯದ ಹಣದಿಂದಲೇ ಕೊಳ್ಳಬೇಕೆಂದರೆ ಮಧ್ಯಮವರ್ಗದ ಆಸೆಗಳು ಗಗನಕುಸುಮವಾಗಿ ಉಳಿದುಬಿಡುತ್ತವೆ. ನಿರಂತರವಾಗಿ ಏರುತ್ತಿರುವ ಬೆಲೆಗಳು ಬಳಕೆದಾರರ ದೂರಗಾಮಿ ಯೋಜನೆಗಳನ್ನು ಭಗ್ನಗೊಳಿಸಬಹುದು. ಬಿಕರಿದಾರರಿಂದ ಕಂತು ಪಾವತಿ ಸೌಲಭ್ಯ ದೊರೆಯಬಹುದಾದರೂ ಬಡ್ಡಿಯ ದರ ಬಲು ಹೆಚ್ಚು. ಮೊದಲೇ ಕೆಲವು ಕಂತುಗಳನ್ನು ಕಟ್ಟುವುದಿದ್ದರಂತೂ ನಷ್ಟಸಂಭಾವ್ಯತೆಯು ಅಧಿಕ. ಈ ಪರಿಸ್ಥಿತಿಯಲ್ಲಿ ಬ್ಯಾಂಕುಗಳ ಬಳಕೆ ಉದರಿ ಮಧ್ಯಮ ವರ್ಗಕ್ಕೆ ವರದಾನವೆನ್ನಿಸೀತು.

ಮಧ್ಯಮವರ್ಗಗಳು ಬಳಸುವ ಗೃಹೋಪಯೋಗಿ ವಸ್ತುಗಳ ಅಧಿಕ ಉತ್ಪಾದನೆಗೆ ಬಳಕೆದಾರ ಉದರಿಯಿಂದ ಅನುಕೂಲವಾಗಬಹುದೆಂಬ ನಿರೀಕ್ಷೆಯೂ ಇದೆ.

ಬ್ಯಾಂಕುಗಳ ದೃಷ್ಟಿಯಿಂದಲೂ ಕೆಲವು ಅನುಕೂಲತೆಗಳುಂಟು. ಬಳಕೆದಾರ ಉದರಿಯಿಂದ ಸಾರ್ವಜನಿಕರ ಖರೀದಿ ಸಾಮರ್ಥ್ಯ ಹೆಚ್ಚುವಂತೆಯೇ ಅವರ ಉಳಿತಾಯ ಸಾಮರ್ಥ್ಯವೂ ಅಧಿಕಗೊಳ್ಳುವುದು ನಿಜ. ಈ ಉಳಿತಾಯದ ಒಂದು ಭಾಗ ಬ್ಯಾಂಕುಗಳಲ್ಲೇ ಠೇವಣಿಯಾಗುವುದೆಂದು ಭಾವಿಸಲು ಅವಕಾಶವಿದೆ. ಈ ಸಾಲಗಳು ತರುವ ಅಧಿಕ ಬಡ್ಡಿ ಬ್ಯಾಂಕುಗಳಿಗೆ ಆಕರ್ಷಕ. ಸಾಲದ ಅಭದ್ರತೆಯ ಆತಂಕ ಕಡಿಮೆ.

ಇಂಥ ಉದರಿಯಲ್ಲಿ ಅನನುಕೂಲತೆಗಳು ಇಲ್ಲದಿಲ್ಲ. ಬಳಕೆದಾರರ ದೃಷ್ಟಿಯಿಂದ ಹೇಳುವುದಾದರೆ ಸುಲಭ ಉದರಿಯ ಕಾರಣದಿಂದ ಅನಗತ್ಯ ವಸ್ತುಗಳನ್ನು ಖರೀದಿಸುವಂತಾಗಬಹುದು. ಬಳಕೆದಾರ ಉದರಿಯಿಂದ ಉಳಿತಾಯಸಾಮರ್ಥ್ಯ ಹೆಚ್ಚಿದರೂ, ಉಪಭೋಗ ವಸ್ತುಗಳ ಬೆನ್ನಟ್ಟಿ ಉಳಿತಾಯ ಮಾಯವಾಗಬಹುದೆಂಬ ಆತಂಕವೂ ಇಲ್ಲದಿಲ್ಲ. ಖರೀದಿಸಿದ ವಸ್ತುಗಳಿಗೆ ವಿಮೆ ಕಡ್ಡಾಯವೆಂದು ಬ್ಯಾಂಕು ವಿಧಿಸುವುದರಿಂದ ಖರ್ಚು ಅಧಿಕವಾಗುತ್ತದೆ.

ಬ್ಯಾಂಕುಗಳ ದೃಷ್ಟಿಯಿಂದಲೂ ಕೆಲವು ತೊಂದರೆಗಳುಂಟು. ಹೊಸ ರೀತಿಯ ಈ ಸಾಲಗಳ ಉಸ್ತುವಾರಿ ತಲೆನೋವಾಗುವ ಸಂಭವವಿದೆ. ಸಮಯಾಭಾವದ ಸಮಸ್ಯೆಯನ್ನೂ ಸಿಬ್ಬಂದಿ ಕೊರತೆಯನ್ನೂ ಮುಂಗಾಣಬಹುದು. ಮುಖ್ಯವಾಗಿ ಈ ಸಾಲಗಳ ನೀಡಿಕೆ, ದಸ್ತೈವಜುಗಳ ನವೀಕರಣ, ಖರೀದಿಸಿದ ವಸ್ತುವಿನ ವಿಮೆ, ಉದರಿಯ ಸಮರ್ಪಕ ಬಳಕೆ ಮತ್ತು ಬ್ಯಾಂಕಿಗೆ ಒತ್ತೆಯಾದ ಆಸ್ತಿಗಳ ಸುಸ್ಥಿತಿಯನ್ನು ಖಾತರಿಪಡಿಸಿಕೊಳ್ಳಲು ಸಾಲಗಾರನ ಸ್ಥಳಕ್ಕೆ ಭೇಟಿಗಳು—ಇಂಥ ಜವಾಬ್ದಾರಿಯ ನಿರ್ವಹಣೆ—ಈಗಾಗಲೇ ಹೆಚ್ಚಿನ ಕೆಲಸದ ಭಾರ ಹೊತ್ತಿರುವ ಕ್ಷೇತ್ರಸಿಬ್ಬಂದಿಗೆ—ಸಾಧ್ಯವೇ ಎಂಬುದು ಮುಖ್ಯ ಪ್ರಶ್ನೆ. ಕೃಷಿಗೆ, ಕೈಗಾರಿಕೋದ್ಯಮಗಳಿಗೆ ವಿಶೇಷ ಕ್ಷೇತ್ರಾಧಿಕಾರಿಗಳು ಇರುವಂತೆ ಬಳಕೆದಾರ ಸಾಲಗಳಿಗೂ ಕ್ಷೇತ್ರಾಧಿಕಾರಿಗಳ ಅಗತ್ಯ ಕಂಡುಬಂದೀತು.

### ಸದ್ಯದ ಸ್ಥಿತಿ

ಸಮಸ್ಯೆಗಳೇನೇ ಇರಲಿ, ಬಳಕೆದಾರ ಉದರಿಯಂತೂ ಸ್ವಾಗತಾರ್ಹ. ಸದ್ಯಕ್ಕೆ ಅನುಕೂಲತೆಗಳೇ ಅಧಿಕವಾಗಿ ಕಾಣುತ್ತಿವೆ. ಸಮಸ್ಯೆಗಳು ಉದ್ಭವಿಸಿದಾಗ ಪರಿಹಾರೋಪಾಯಗಳನ್ನು ಕಂಡುಕೊಳ್ಳಲು ಸಾಧ್ಯ. ಮೇಲಾಗಿ ಇಂಥ ಸಾಲಗಳು ಅತಿಯಾದಾಗ ಮಾತ್ರ ದುಷ್ಪರಿಣಾಮಗಳು ಕಂಡಾವು. ಈಗಿನ್ನೂ ತೀರ ಆರಂಭದ ಹಂತ. ಬ್ಯಾಂಕಿಗೆ ಬರುವ ಎಲ್ಲರಿಗೂ ಈ ಸಾಲಗಳು ಲಭಿಸುವುವೆಂದು ಭಾವಿಸುವಂತಿಲ್ಲ. ಮೇಲಾಗಿ, ತಮ್ಮ ಒಟ್ಟು ಠೇವಣಿಯ ಒಂದಂಶವನ್ನು ಮಾತ್ರ (ಉದಾ : ಶೇ. 1ರಷ್ಟು) ಇಂಥ ಸಾಲಗಳ ರೂಪದಲ್ಲಿ ನೀಡುವುದೆಂದು ಬ್ಯಾಂಕುಗಳು ಸಂಯಮ ತಳೆದಿವೆ. ಯೋಜನೆಗಳ ಸಿಹಿ ಕಹಿಗಳು ಅರಿವಾದಂತೆ ನೀತಿ ಬದಲಾವಣೆಗೊಳ್ಳಬಹುದು. ಒಟ್ಟಾರೆ ಭಾರತೀಯ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಬಳಕೆದಾರ ಉದರಿ ಕ್ರಮೇಣ ಬಲಗೊಳ್ಳುವುದೆಂದು ನಂಬಬಹುದಾಗಿದೆ.



ಕೊಳ್ಳಲು ಪ್ರಯತ್ನಿಸುತ್ತಿಲ್ಲ. ಟಾಟಾ ಅಂಥ ಬೃಹತ್ ವ್ಯಾಪಾರ ಜಾಲವುಳ್ಳ ಕಂಪನಿಯೂ ತನ್ನ ತಯಾರಿಸುವ ಸಾಬೂನಿನ ಹೆಸರನ್ನು, ಆಕಾರ, ಹೊದಿಕೆ, ಬಣ್ಣ ಹಾಗೂ ವಿನ್ಯಾಸ ಮುಂತಾದವುಗಳನ್ನು ಬದಲಿಸುತ್ತಲೇ ಇರುತ್ತದೆ ಎಂಬುದು ಗಮನಿಸಬೇಕಾದ ಅಂಶ ಅನ್ನಬಹುದು.

ಈಗಿರುವ ಬ್ಯಾಂಕಿನ ಠೇವಣಿ ಯೋಜನೆಗಳು ಅದೇ ತುಕ್ಕು ಹಿಡಿದ ಹೆಸರುಗಳೊಂದಿಗೆ, ಬಡ್ಡಿದರಗಳು ಬದಲಿಯಾದಾಗ ತಮ್ಮ ಗಾತ್ರ, ಅಂಕೆ-ಸಂಖ್ಯೆಗಳನ್ನು ಬದಲಿಸಿಕೊಳ್ಳುತ್ತ ಹಾಗೆಯೇ ಚಲಾವಣೆಯ ಸವಕಲು ನಾಣ್ಯಗಳಾಗಿ ಉಳಿದುಕೊಂಡಿವೆ. ಈ ಠೇವಣಿ ಯೋಜನೆಗಳು ಗ್ರಾಮೀಣ ವಲಯಕ್ಕೆ, ಅವರ ಅನಿಶ್ಚಿತ ಬದುಕಿಗೆ ಎಳ್ಳಷ್ಟೂ ಪ್ರಯೋಜನವಿಲ್ಲದವುಗಳಾಗಿವೆ. ಯಾವ ಠೇವಣಿ ಯೋಜನೆಯೂ ಹಳ್ಳಿಯ ಜನರ ದುಡಿಮೆಗೆ, ಆದಾಯಕ್ಕೆ ತಕ್ಕುದಾಗಿ ಹೊಂದಿಕೊಳ್ಳುವುದಿಲ್ಲ. ಒಟ್ಟಿನಲ್ಲಿ ಈ ಬೃಹತ್ ವಲಯವನ್ನು ಬ್ಯಾಂಕುಗಳು ಈಗಾಗಲೇ ಸಾಕಷ್ಟು ಅಲಕ್ಷಿಸಿವೆ.

ಮಾಸಿಕ ವರಮಾನವಿಲ್ಲದವರಿಂದ ಸಂಚಿತ ಠೇವಣಿ ಸಂಗ್ರಹ ಸಾಧ್ಯವೆ? ಬದುಕು ಅನಿಶ್ಚಿತತೆಯಿಂದ ಕೂಡಿರುವವರಿಂದ, ನೈಸರ್ಗಿಕ ಪ್ರಕೋಪಕ್ಕೆ, ಬರಗಾಲದ ಬವಣೆಗೆ ಒಳಗಾಗಿ ಮಳೆಗಾಗಿ ಆಕಾಶದತ್ತ ಬಾಯಿ ಬಿಡುವವರಿಂದ ಬ್ಯಾಂಕುಗಳು ಎಂಥ ನಿಶ್ಚಿತ ಠೇವಣಿ ಪಡೆಯಬಹುದು? ಸಾಮಾನ್ಯವಾಗಿ ಈಗಿರುವ ಬ್ಯಾಂಕುಗಳ ಠೇವಣಿ ಯೋಜನೆಗಳು ಗ್ರಾಮೀಣ ವಲಯಕ್ಕೆ ನಿರಾಶಾದಾಯಕವಾಗಿವೆ.

ಈ ಠೇವಣಿ ಯೋಜನೆಗಳು ಕೇವಲ ನಗರಗಳಲ್ಲಿ ಜನಜೀವನಕ್ಕೆ ಕೊಂಚ ಪೂರಕವಾಗಿ ಸ್ಪಂದಿಸಬಲ್ಲವಾದರೂ ಇತ್ತೀಚಿನ ಷೇರುಬಂಡವಾಳ ಹೂಡಿಕೆ. ಹಾಗೂ ಇನ್ನಿತರ ಔದ್ಯಮಿಕ ವಲಯಗಳು ನಗರದ ಠೇವಣಿದಾರರನ್ನು ತಮ್ಮತ್ತ ಆಕರ್ಷಿಸುತ್ತಿರುವುದರಿಂದ ಬ್ಯಾಂಕುಗಳ ಠೇವಣಿ ವೃದ್ಧಿ ತೃಪ್ತಿದಾಯಕವಾಗಿಲ್ಲ. ಒಂದು ಕಡೆ ಆದ್ಯತಾವಲಯಕ್ಕೆ ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡಲೇಬೇಕಾದ ಅನಿವಾರ್ಯತೆಯಲ್ಲಿ ತೊಳಲಾಡುತ್ತಿರುವಾಗ ಇನ್ನೊಂದೆಡೆ ಠೇವಣಿ ಬೆಳವಣಿಗೆ ತೃಪ್ತಿದಾಯಕವಾಗಿಲ್ಲ. ಇಂಥ ಸಂದಿಗ್ಧ ಸಮಯದಲ್ಲಿ ಬ್ಯಾಂಕುಗಳು ತಮ್ಮ ಠೇವಣಿ ಯೋಜನೆಗಳನ್ನು ಪುನರ್ ವಿಮರ್ಶಿಸಿಕೊಳ್ಳಬೇಕಾಗಿದೆ. ಅದರಲ್ಲೂ ಗ್ರಾಮೀಣ ವಲಯಕ್ಕೆ ಆಸಕ್ತಿಯಿಂದ ಅಭ್ಯಾಸಪೂರ್ಣವಾಗಿ ಅತ್ಯಂತ ಹೆಚ್ಚಿನ ಗಮನವನ್ನು ಬ್ಯಾಂಕುಗಳು ನೀಡಬೇಕಾದದ್ದು ಈಗ ಅಗತ್ಯವಾಗಿದೆ. ಇದೊಂದು ತುರ್ತಾಗಿ ಮಾಡಬೇಕಾದ ಕೆಲಸವೂ ಹೌದು.

ಠೇವಣಿಯೆಂದರೆ ಹಣ ಇದ್ದವರ ಹತ್ತಿರ ಹೋಗಿ ಕೇಳಿ ಪಡೆಯುವುದಷ್ಟೆ ಅಲ್ಲ. ಬ್ಯಾಂಕುಗಳ ಈಗಿರುವ ಠೇವಣಿ ಯೋಜನೆಗಳು ಅಂಥವುಗಳೇ. ಉದಾಹರಣೆಗೆ, ಕೆಲಸದಲ್ಲಿರುವವರನ್ನು ಗುರುತಿಸಿ ಸಂಚಿತ ಠೇವಣಿ ಹೊಂದುವುದು, ಜಮೀನುದಾರರು ಮತ್ತು ಭಾರಿ ಕಂಟ್ರಾಕ್ಟುದಾರರಿಂದ ನಿಶ್ಚಿತ ಠೇವಣಿ ಪಡೆಯುವುದು—ಇವೇ ಠೇವಣಿ ಯೋಜನೆಗಳ ದುರಂತಗಳು. ಕೇವಲ ಧನಿಕರನ್ನು, ಸಂಬಳದವರನ್ನು ಗುರುತಿಸುವುದಕ್ಕೆ ಬದಲಾಗಿ ಬ್ಯಾಂಕುಗಳು ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವ, ಶಾಖೆಗಳ ಸುತ್ತಲಿನ ಎಲ್ಲ ಜನರ ಸರ್ವತೋಮುಖ ಆರ್ಥಿಕ ಅಭಿವೃದ್ಧಿಗೆ ಮುಂದಾಗಬೇಕು. ಆಗ ಮಾತ್ರ ಬ್ಯಾಂಕುಗಳು ನಿಜವಾದ ಠೇವಣಿಯನ್ನು ಪಡೆಯಬಹುದು.

ಇಲ್ಲಿ ಹೇಳಹೊರಟಿರುವ ವಿಷಯಗಳು, ಭಾವಿ ಠೇವಣಿ ಯೋಜನೆಗಳ ರೂಪರೇಷೆಗಳು. ಸದ್ಯಕ್ಕೆ ಕೆಲವು ಅಸಂಗತ ಅನ್ನಿಸಬಹುದಾದರೂ ಮುಂಬರುವ ಇಪ್ಪತ್ತೊಂದನೆಯ ಶತಮಾನದಲ್ಲಿ ಈ ಬಗ್ಗೆ ಹೆಚ್ಚಿನ ಕಾಳಜಿ ಬ್ಯಾಂಕುಗಳಿಗೆ ಮೂಡಿ ಬರಬಹುದೆಂಬ ಆಸೆ.

## ಸಮಗ್ರ ಚಿತ್ರಣ

ಠೇವಣಿಗೆ ಮೊದಲು ಬ್ಯಾಂಕುಗಳು ಸಮಗ್ರ ಗ್ರಾಮೀಣ ಚಿತ್ರಣವನ್ನು ದೂರದೃಷ್ಟಿಯಿಂದ ನೋಡಬೇಕು. ದೇಶದ ಪ್ರತಿಯೊಂದು ಹಳ್ಳಿಯನ್ನೂ ಅಭ್ಯಸಿಸಬೇಕು. ಈ ಬಗ್ಗೆ ದೇಶವನ್ನು ಅಧ್ಯಯನಕ್ಕೆ ಅನುಕೂಲವಾಗುವಂತೆ ವಿಂಗಡಿಸಿ ಈಗೀಗ ಪ್ರಚಲಿತವಾಗುತ್ತಿರುವ 'ಸೇವಾ ಕ್ಷೇತ್ರ ಅಭಿಗಮನ'ದ ಪೂರ್ವಭಾವಿ ತಯಾರಿಯಂತೆ ಇಡೀ ಭಾರತವನ್ನು ಠೇವಣಿ ದೃಷ್ಟಿಯಿಂದ ಅಭ್ಯಸಿಸಬೇಕು.

ಎಲ್ಲ ರಾಷ್ಟ್ರೀಕೃತ ಬ್ಯಾಂಕುಗಳು ಈ ಬಗ್ಗೆ ಒಂದು ಸಮಗ್ರ ಕಾರ್ಯಕ್ರಮವನ್ನು ಜಂಟಿಯಾಗಿ ರೂಪಿಸಿಕೊಳ್ಳಬೇಕು. ಒಟ್ಟಾರೆ ಗ್ರಾಮೀಣ ಜನತೆಯ ಸರ್ವತೋಮುಖ ಅಭಿವೃದ್ಧಿಗಾಗಿ ಲಭ್ಯವಿರುವ ಎಲ್ಲ ಮಾಹಿತಿಗಳನ್ನೂ ಸಂಗ್ರಹಿಸಬೇಕು. ಪ್ರತಿಯೊಂದು ಪ್ರದೇಶದ ಹವಾಮಾನ, ಮಳೆ ಪ್ರಮಾಣ, ಬರಗಾಲ, ಪ್ರವಾಹಪೀಡಿತ, ವಾರ್ಷಿಕ ತಲಾವರಮಾನ, ಬಂಡವಾಳದ ಕೊರತೆ, ಸಂಪನ್ಮೂಲಗಳ ಮೂಲಗಳು, ಮುಂತಾದವುಗಳನ್ನು ಕುರಿತು ಸ್ಥಳೀಯ ಬ್ಯಾಂಕುಗಳು ಇಲ್ಲವೆ ಅವುಗಳಿಂದ ನಿಯೋಜಿಸಲ್ಪಟ್ಟ ವಿಜ್ಞರು ವಿವರಗಳನ್ನು ಸಂಗ್ರಹಿಸಬೇಕು. ಜೊತೆಗೆ ಆಧುನಿಕ ಕೃಷಿ ಸಾಧನಗಳ ಬಳಕೆಯ ಸಾಧ್ಯತೆಗಳು, ಶಿಕ್ಷಣ ಮಟ್ಟ, ನೀರಾವರಿ ಸೌಲಭ್ಯ, ರಸ್ತೆಗಳು, ಆರೋಗ್ಯ ಕೇಂದ್ರಗಳು, ಜನಸಂಖ್ಯೆ ಪ್ರಮಾಣ, ಕೂಲಿಕಾರರ ಸಂಖ್ಯೆ, ಸರಾಸರಿ ಹಿಡುವಳಿ ಭೂಮಿ, ಜಮೀನುದಾರರು, ಗೋಮಾಳಗಳು, ಕರಕುಶಲತೆ, ಹೈನು ಉದ್ಯಮ, ಮೀನುಗಾರಿಕೆ, ನಿರುದ್ಯೋಗಿಗಳ ಸಂಖ್ಯೆ, ಇಂಥ ಎಲ್ಲ ಮಾಹಿತಿಗಳನ್ನು ವ್ಯವಸ್ಥಿತ ರೀತಿಯಲ್ಲಿ ಕಲೆಹಾಕಬೇಕು. ಮೇಲ್ನೋಟಕ್ಕೆ ಇದು ಅಸಾಧ್ಯವಾದ ಕೆಲಸವೆನಿಸಿದರೂ ಸುಮಾರು ಒಂದೆರಡು ವರ್ಷಗಳಲ್ಲಿ ಗಣಕಯಂತ್ರಗಳ ಸಹಾಯದಿಂದ ಸಮಗ್ರ ಗ್ರಾಮೀಣ ಭಾರತದ ಚಿತ್ರಣ ಸಿಗುತ್ತದೆ.

## ಭಾಷೆ, ರಾಜಕಾರಣ

ಮುಖ್ಯವಾದ ಅಡಚಣೆ ಇರುವುದು ಭಾಷೆಯದು. ಬ್ಯಾಂಕಿನದು ಜನಭಾಷೆಯಾಗಬೇಕು. ಎಲ್ಲ ಭಾರತೀಯಭಾಷೆಗಳ ಅಭಿವೃದ್ಧಿಯಾಗಬೇಕು. ಗ್ರಾಮೀಣ ಜನರಿಗೆ ಬ್ಯಾಂಕುಗಳು ಹತ್ತಿರವಾಗಲು ಇದೊಂದೇ ಸುಲಭ ಮಾರ್ಗ. ಜನರಾಡುವ ಭಾಷೆಯಲ್ಲಿ ಬ್ಯಾಂಕುಗಳು ಕಡ್ಡಾಯವಾಗಿ ವ್ಯವಹರಿಸಬೇಕು. ಇದಕ್ಕೆ ಜೊತೆಯಾಗಿ ಬ್ಯಾಂಕಿನ ಸಿಬ್ಬಂದಿಗೆ ಗ್ರಾಮೀಣ ವಲಯದಲ್ಲಿ ಸೇವೆ ಮಾಡುವುದು ಆವಶ್ಯಕ ಮಾಡಬೇಕು. ತಮ್ಮ ಕೆಲಸದ ಅವಧಿಯನ್ನು ಪೂರ್ಣವಾಗಿ ಗ್ರಾಮೀಣ ವಲಯಕ್ಕೆ ಮೀಸಲಾಗಿಡುವಂಥ ಆಸಕ್ತಿಯುಳ್ಳವರನ್ನು ಬ್ಯಾಂಕುಗಳು ಆಯ್ದುಕೊಳ್ಳಬೇಕು. ಗ್ರಾಮಸ್ಪಂದನ ಬ್ಯಾಂಕುಗಳಲ್ಲಿ ಬಹಳ ಕಡಿಮೆ. ಬ್ಯಾಂಕಿನ ಸಿಬ್ಬಂದಿ ಗ್ರಾಮಸ್ಥರ ಬದುಕಿನಲ್ಲಿ ಒಂದಾಗಿ ಬೆರೆಯಬೇಕು.

ಜನರು ಮತ್ತು ಬ್ಯಾಂಕುಗಳ ನಡುವೆ ಇರುವ ಇನ್ನೊಂದು ಕಂದರವೆಂದರೆ ರಾಜಕಾರಣಿಗಳು. ಪ್ರಗತಿಯಲ್ಲಿ ಪ್ರಮುಖ ತೊಡಕಾಗಿರುವ ರಾಜಕಾರಣಿಗಳನ್ನು ದೂರವಿರಿಸಲು ಬ್ಯಾಂಕುಗಳು ಒಂದು ರಾಷ್ಟ್ರೀಯ ದೃಷ್ಟಿಕೋನವನ್ನು ರೂಪಿಸಿಕೊಳ್ಳಬೇಕು. ಬ್ಯಾಂಕುಗಳ ವ್ಯವಹಾರದಲ್ಲಿ ತಲೆ ಹಾಕುವುದು, ಮಧ್ಯವರ್ತಿಗಳಾಗುವುದು ಅಪರಾಧವೆಂದು ಪರಿಗಣಿಸಲ್ಪಡಬೇಕು. ಗ್ರಾಮೀಣ ವಲಯದಲ್ಲಿ ಸಾಲನೀಡುವಾಗ ಆಗಬಹುದಾದ ಭ್ರಷ್ಟಾಚಾರವನ್ನು ತಡೆಯಲು ಬ್ಯಾಂಕುಗಳು ತಮ್ಮವೇ ಆದ ಜಾಗ್ರತ ದಳಗಳನ್ನು ರೂಪಿಸಿಕೊಳ್ಳಬೇಕು.

ಈ ಮೇಲಿನ ರೂಪರೇಷೆಗಳ ಹಿನ್ನೆಲೆಯಲ್ಲಿ ಬ್ಯಾಂಕುಗಳು ಕಾರ್ಯಕ್ರಮಗಳನ್ನು ರೂಪಿಸಿಕೊಂಡರೆ ಗ್ರಾಮೀಣ ವಲಯದ ಸರ್ವತೋಮುಖ ಪ್ರಗತಿಯು ಹೊರಹೊಮ್ಮಿ ಬ್ಯಾಂಕುಗಳ ಠೇವಣಿಗೆ ಶಾಶ್ವತ ಭವಿಷ್ಯದ ಭದ್ರ ಅಡಿಪಾಯ ಆಗುತ್ತದೆ.

## ಹೊಸ ಯೋಜನೆಗಳು

ಇನ್ನು ಹೊಸ ಠೇವಣಿ ಯೋಜನೆಗಳು ಗ್ರಾಮೀಣ ವಲಯದಲ್ಲಿ ಈ ಕೆಳಗೆ ಹೇಳಿದಂತೆ ರೂಪಿತವಾದರೆ ಠೇವಣಿಗಳ ಬೆಳವಣಿಗೆ ಗಣನೀಯವಾಗಿ ಆಗುತ್ತದೆ.

(1) ಪ್ರತಿಯೊಬ್ಬ ಗ್ರಾಮಜೀವಿಯನ್ನೂ ಬ್ಯಾಂಕಿನ ಗ್ರಾಹಕನನ್ನಾಗಿಸುವುದು ಹಾಗೂ ತನ್ಮೂಲಕ ಅವನಿಗೆ ಸರ್ವರೀತಿಯ ವಿಮಾಯೋಜನೆಯಡಿಯಲ್ಲಿ ಗ್ರಾಮೀಣ ಬದುಕಿಗೆ ರಕ್ಷಣೆ ನೀಡುವುದು. ಈಗಿರುವ ವಿಮೆ ಯೋಜನೆಗಳಲ್ಲಿ ಮಾರ್ಪಾಟುಗಳನ್ನು ಮಾಡಿ ಗ್ರಾಮೀಣ ರೈತರು ಕೇವಲ ಬ್ಯಾಂಕ್ ಗ್ರಾಹಕರಾಗಿದ್ದುಕೊಂಡು ಪಶು ವಿಮೆ, ಬರಗಾಲ ವಿಮೆ, ಬೆಳೆ ವಿಮೆ, ಹಾಗೂ ಬೆಂಕಿ ವಿಮೆ ಮುಂತಾದವು

# ಸೇವಾಕ್ಷೇತ್ರ ಅಭಿಗಮನ

**ಸರಿಯಾಗಿ ಜಾರಿಗೆ ತಂದರೆ ಇದು ಒಂದು ಒಳ್ಳೆಯ ಯೋಜನೆ. ಇಲ್ಲದಿದ್ದರೆ ಇದುವರೆಗೆ ಬಂದು ಹೋದ ನಿರರ್ಥಕ ಪ್ರಯೋಗಗಳ ಸಾಲಿಗೆ ಇದೂ ಸೇರುತ್ತದೆ.**

**ಎಸ್. ಕಮಲ**
ಶಂಕರಪುರಂ ಶಾಖೆ
ಮತ್ತು
**ಗಣೇಶ್ ಭಟ್**
ಎನ್. ಆರ್. ಪುರಂ ಶಾಖೆ
ಸ್ಟೇಟ್ ಬ್ಯಾಂಕ್ ಆಫ್ ಮೈಸೂರು

1969ನೆಯ ಇಸವಿಯಲ್ಲಿ ಹದಿನಾಲ್ಕು ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣದೊಂದಿಗೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಒಂದು ಇತಿಹಾಸವೇ ಸೃಷ್ಟಿಯಾಯಿತು. ಪಟ್ಟಣಗಳು ಮತ್ತು ಕೆಲವು ಉಳ್ಳವರ ವರ್ಗಕ್ಕಷ್ಟೇ ಸೀಮಿತವಾಗಿದ್ದ ಬ್ಯಾಂಕಿಂಗ್ ವ್ಯವಹಾರ ಹಳ್ಳಿ ಹಳ್ಳಿಗೂ,ಜನಸಾಮಾನ್ಯರಿಗೂ ಎಟುಕುವಂತಾದದ್ದು ಈ ದಿಶೆಯಲ್ಲಿ ನಡೆದ ಒಂದುಮಹತ್ತರ ಬದಲಾವಣೆ. ಇದರಿಂದಾಗಿ ಅದುವರೆಗೆ ಕಡೆಗಣಿಸಲ್ಪಟ್ಟಿದ್ದ ಕ್ಷೇತ್ರಗಳಾದ ಕೃಷಿ, ಸಣ್ಣ ಕೈಗಾರಿಕೆ ಮುಂತಾದ ವಲಯಗಳಿಗೆ ಬ್ಯಾಂಕುಗಳು ಹೆಚ್ಚು ಹೆಚ್ಚು ಗಮನ ನೀಡಿ ಸಹಾಯ ಮಾಡುವಂತಾಯಿತು. ಆದ್ಯತಾ ವಲಯಗಳಿಗೆ ಸಹಾಯ ಮಾಡಲು (ಅದರಲ್ಲೂ ಮುಖ್ಯವಾಗಿ ಗ್ರಾಮೀಣ ಅಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡು) ಸರಕಾರ ಹಾಗು ಬ್ಯಾಂಕುಗಳು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ಅಂತ್ಯೋದಯ, ವಿಭಿನ್ನ ಬಡ್ಡಿದರ ಯೋಜನೆ, ಇತ್ತೀಚಿನವರೆಗೆ ಭಾರೀ ಪ್ರಚಾರ ಗಿಟ್ಟಿಸಿದ ಸಾಲ ಮೇಳ ಮುಂತಾದ ಹಲವಾರು ಯೋಜನೆಗಳು ಮತ್ತು ಕಾರ್ಯಕ್ರಮಗಳ ಮೂಲಕ ಅವಿರತವಾಗಿ ಶ್ರಮಿಸುತ್ತಿವೆ. ಈ ಕಾರ್ಯಕ್ರಮಗಳಿಗೆ ಭಾರೀ ಪ್ರಚಾರ, ಸಾಕಷ್ಟು ಹಣ, ಬ್ಯಾಂಕ್ ಸಿಬ್ಬಂದಿಗಳು ಶ್ರಮ ಖರ್ಚು ಮಾಡಿದರೂ ಗಮನಾರ್ಹವಾದ ಗ್ರಾಮೀಣ ಅಭಿವೃದ್ಧಿ ಕಂಡುಬಂದಿಲ್ಲ. ಯಶಸ್ವೀ ಗ್ರಾಮೀಣ ಅಭಿವೃದ್ಧಿಗಾಗಿ ಭಾರತೀಯ ರಿಸರ್ವ್ ಬ್ಯಾಂಕ್ ಕಂಡುಕೊಂಡ ಒಂದು ಹೊಸ ಸಾಧನವೇ ಸೇವಾ ಕ್ಷೇತ್ರ ಅಭಿಗಮನ.

ಭಾರತೀಯ ರಿಸರ್ವ್ ಬ್ಯಾಂಕ್ ಎಲ್ಲ ಬ್ಯಾಂಕುಗಳ ಹಾಗೂ ಭಾರತ ಸರ್ಕಾರದ ವರಿಷ್ಠ ಅಧಿಕಾರಿಗಳ ಒಂದು ಸಭೆಯನ್ನು 1988ರ ಜನವರಿ 9 ಮತ್ತು 10ನೆಯ ತಾರೀಖಿನಂದು ಮುಂಬೈಯಲ್ಲಿ ಕರೆಯಿತು. ಈ ಸಭೆಯಲ್ಲಿ ಗ್ರಾಮೀಣ ಸಾಲ ಹಾಗೂ ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಸಾಕಷ್ಟು ವಿಚಾರ ವಿನಿಮಯ ಮತ್ತು ಚರ್ಚೆ ನಡೆಯಿತು. ಹಳ್ಳಿಗಳಲ್ಲಿ ಮತ್ತು ಅರೆ ನಗರ ಪ್ರದೇಶಗಳಲ್ಲಿ ಇನ್ನೂ ಹೆಚ್ಚು ಹೆಚ್ಚು ಬ್ಯಾಂಕ್ ಶಾಖೆಗಳನ್ನು ತೆರೆಯುವುದು ಹಾಗೂ ಪ್ರತಿ ಬ್ಯಾಂಕ್ ಶಾಖೆಗೆ ಒಂದೊಂದು ನಿರ್ದಿಷ್ಟ ಕ್ಷೇತ್ರವನ್ನು ಮೀಸಲಿಟ್ಟು ಆ ಕ್ಷೇತ್ರದ ಸಂಪೂರ್ಣ ಅಭಿವೃದ್ಧಿಯ ಜವಾಬ್ದಾರಿ

---

## ಗ್ರಾಮೀಣ ವಲಯಕ್ಕೆ ವಿಶೇಷ ಠೇವಣಿ ಯೋಜನೆಗಳು

[14ನೇ ಪುಟದಿಂದ ಮುಂದುವರಿದುದು

ಗಳನ್ನು ಸುಲಭವಾಗಿ ಅಂದರೆ ಪುಕ್ಕಟೆಯಾಗಿ ಇಲ್ಲವೆ ಕಡಿಮೆ ದರದಲ್ಲಿ ಪಡೆಯುವಂತಿರಬೇಕು. ಪ್ರತಿಯೊಂದು ಹಳ್ಳಿಯೂ ಸರ್ವಕಾಲೀನ ವಿಮೆ ಅಡಿಯಲ್ಲಿ ಬರುವಂತೆ ಜಂಟಿಯಾಗಿ ಬ್ಯಾಂಕುಗಳು, ಸರಕಾರ, ವಿಮೆ ಸಂಸ್ಥೆಗಳು ಒಂದು ಸಮಗ್ರ ಯೋಜನೆಯನ್ನು ರೂಪಿಸಬೇಕು. ಈ ಆಶಾಕಿರಣ ಗ್ರಾಮೀಣ ಜನರಲ್ಲಿ ಬ್ಯಾಂಕಿನ ಬಗ್ಗೆ ಆಶಾಭಾವನೆಯನ್ನು ಹೆಚ್ಚಿಸುತ್ತದೆ.

(2) ಗ್ರಾಮೀಣ ಜನರು ಠೇವಣಿಯಾಗಿಡುವ ಹಣದ ಮೊತ್ತದಷ್ಟು ಹಣಕ್ಕೆ ಅವರು ತಿಳಿಸುವ ಯಾವುದಾದರೂ ವಸ್ತು ಅಂದರೆ ಬೆಳೆ, ಪಶು, ಪಶು ಆಹಾರ ಇತ್ಯಾದಿಗಳಿಗೆ ಪುಕ್ಕಟೆ ವಿಮೆಯನ್ನು ಬ್ಯಾಂಕುಗಳು ಒದಗಿಸಬೇಕು. ಇದರಮೇಲೆ ಭರಿಸುವ ವೆಚ್ಚ ಅಧಿಕವೆನಿಸಿದರೂ ಠೇವಣಿಗಳ ವೃದ್ಧಿಯಿಂದ ಬರುವ ಲಾಭದೊಂದಿಗೆ ತುಲನೆಮಾಡಿದರೆ ಗೌಣವೇ ಅನಿಸುತ್ತದೆ.

(3) ಗ್ರಾಮೀಣ ವಲಯದ ಠೇವಣಿಗಳಲ್ಲಿ ರಿಸರ್ವ್ ಬ್ಯಾಂಕ್ ನಿಯಮದಂತೆ ಬಡ್ಡಿಯನ್ನು ನೀಡುವಾಗ ಅದರ ಜೊತೆ 1% ಅಧಿಕ ಬಡ್ಡಿಯನ್ನು ವಿಶೇಷ ರಿಯಾಯಿತಿ ಎಂದು ನೀಡಬೇಕು. ಈ ಬಗ್ಗೆ ರಿಸರ್ವ್ ಬ್ಯಾಂಕ್ ನಿಯಮದಲ್ಲಿ ಬದಲಾವಣೆಯಾಗಬೇಕು.

(4) ಸುಗ್ಗಿಯ ಹಾಗೂ ಫಸಲುಗಳ ಮಾರಾಟದ ದಿನಗಳಲ್ಲಿ–ಬರುವ ಮುಂಗಾರು ಪ್ರಾರಂಭವಾಗುವವರೆಗಿನ ಅವಧಿಯಲ್ಲಿ—ರೈತರು ತಮ್ಮಲ್ಲಿರುವ ಹೆಚ್ಚುವರಿ ಹಣವನ್ನು ಮಂಡಿ ಸಾಹುಕಾರರಲ್ಲಿ ಇಡದೆ ಬ್ಯಾಂಕುಗಳಲ್ಲಿ ಜಮೆ ಮಾಡಿದರೆ ಸ್ವಲ್ಪ ಹೆಚ್ಚಿನ ಬಡ್ಡಿಯನ್ನು ನೀಡಬೇಕು. ಈ ಅವಧಿಯ ಅಲ್ಪಕಾಲಾವಧಿ ಠೇವಣಿಗಳು ಹೆಚ್ಚು ಆಕರ್ಷಕವಾಗುವಂತೆ ಯೋಜನೆಗಳನ್ನು ರೂಪಿಸಬೇಕು.

(5) ಕಮಿಷನ್ ಆಧಾರದ ಮೇಲೆ ಗ್ರಾಮೀಣ ವಲಯದಲ್ಲಿ ಮನೆಮನೆಗೂ ಹೋಗಿ ಠೇವಣಿ ಸಂಗ್ರಹಿಸುವಂತೆ ಏಜೆಂಟರನ್ನು ನಿಯಮಿಸಿಕೊಳ್ಳಬೇಕು. ಬೇಕಾದರೆ ಅವರನ್ನು ಸಾಲ ವಸೂಲಿಗಾಗಿಯೂ ಬ್ಯಾಂಕುಗಳು ಬಳಸಿಕೊಳ್ಳಬಹುದು.

(6) ಕಾಳುಗಳನ್ನುಸುರಕ್ಷಿತವಾಗಿಡುವ ಗುದಾಮುಗಳನ್ನು ಬ್ಯಾಂಕುಗಳು ಖುದ್ದಾಗಿ ಇಲ್ಲವೇ ಆಹಾರನಿಗಮದಿಂದ ಪಡೆದುಕೊಂಡು ಠೇವಣಿದಾರರಿಗೆ ಠೇವಣಿ ಮೊತ್ತದಷ್ಟು ಬೆಲೆಯ ಕಾಳುಗಳನ್ನು ಗುದಾಮುಗಳಲ್ಲಿ ಸಂರಕ್ಷಿಸಿ ಇಟ್ಟುಕೊಳ್ಳಲು ಬ್ಯಾಂಕುಗಳು ಸಹಕರಿಸಬೇಕು. ಈ ಬಗ್ಗೆ ಕಡಿಮೆ ವೆಚ್ಚವನ್ನು ರೈತರಿಂದ ತೆಗೆದುಕೊಂಡರೆ ಅಥವಾ ಯಾವ ಶುಲ್ಕವಿಲ್ಲದೆ ಈ ಸೌಲಭ್ಯವನ್ನು ಒದಗಿಸಿದರೆ ಇದನ್ನು 'ಕಾಳು ಉಳಿತಾಯ ಯೋಜನೆ' ಎಂಬ ಹೆಸರಿನಲ್ಲಿ ಜನಪ್ರಿಯಗೊಳಿಸಬೇಕು.

(7) ಇತ್ತೀಚೆಗೆ ಪ್ರಚಲಿತವಾಗಿರುವ ಹಸುರು ಕಾರ್ಡ್ ಜೊತೆಗೆರೈತರಿಗೆ ವ್ಯವಸಾಯ ಆಧಾರಿತ ಸುಗ್ಗಿ ಕಾರ್ಡ್, ಹಾಲಿನ ಕಾರ್ಡ್, ಮದುವೆಯ ದುಂದು ವೆಚ್ಚಗಳನ್ನು ತಗ್ಗಿಸಲು ಮದುವೆ ಕಾರ್ಡ್ ಅಥವಾ ಕಲ್ಯಾಣ ಕಾರ್ಡುಗಳನ್ನು ಠೇವಣಿ ಸಂಗ್ರಹಕ್ಕೆ ಬಳಸಿಕೊಳ್ಳಬೇಕು.

(8) ವ್ಯಕ್ತಿಗತ ಠೇವಣಿಗಳ ಜೊತೆಗೆ ಸಾಮೂಹಿಕ ಠೇವಣಿಗಳನ್ನು ಜಾರಿಯಲ್ಲಿ ತರುವುದು ವಿಹಿತ. ಸಾಮೂಹಿಕ ಠೇವಣಿಗಳಿಂದ ಗ್ರಾಮದ ಸರ್ವತೋಮುಖ ಸುಧಾರಣೆ ಮಾಡುವುದು ಸಮಯೋಚಿತ. ಉದಾಹರಣೆಗೆ ಸಾಮೂಹಿಕವಾಗಿ ಕುಟುಂಬದಲ್ಲಿ ಒಬ್ಬರು ಒಂದು ಸಾವಿರದಂತೆ ಠೇವಣಿ ನೀಡಿದರೆ ಅಂಥ ಠೇವಣಿಯನ್ನು ಬಳಸಿಕೊಂಡು, ಅದರಿಂದ ಬರುವ ಲಾಭದಲ್ಲಿ ಸಾಮೂಹಿಕ ಮದುವೆ/ಮುಂಜಿಗಳನ್ನು ಅಲ್ಪ ವೆಚ್ಚದಲ್ಲಿ ಮಾಡಬಹುದು.

ಇಂಥ ನೂರಾರು ವಿಚಾರಗಳು ಆಗಬಹುದು. ಈ ಬಗ್ಗೆ ಪ್ರಯತ್ನ ಮಾಡುವಲ್ಲಿ ಬ್ಯಾಂಕುಗಳು ಗಮನ ಹರಿಸಬೇಕು. ವೆಚ್ಚದ ಪ್ರಶ್ನೆ. ಅಸಾಧ್ಯತೆ ಸ್ವಲ್ಪ ಅನಿಸಿದರೂ ಇಂಥ ಯೋಜನೆಗಳಿಂದ ಗ್ರಾಮೀಣ ವಲಯದ ಠೇವಣಿಯಲ್ಲಿ ಗಣನೀಯ ಪ್ರಮಾಣದ ಹೆಚ್ಚಳವಾಗುವುದು ಖಂಡಿತ. ಮೊದ ಮೊದಲು ಒಂದೆರಡನ್ನು ಪ್ರಾಯೋಗಿಕವಾಗಿ ಮಾಡಿದರೆ ಒಳಿತು. ಒಟ್ಟಿನಲ್ಲಿ ಒಂದು ಮಾತು ಮಾತ್ರ ನಿಜ. ಬರಿ ಕರಪತ್ರಗಳಿಂದ, ಫಲಕಗಳಿಂದ, ಬಣ್ಣದ ಮಾತುಗಳಿಂದ ಠೇವಣಿ ವೃದ್ಧಿ ಆಗಲಾರದು. ಬ್ಯಾಂಕುಗಳು ಇದನ್ನು ಗಮನಿಸಬೇಕು.

★

ಯನ್ನು ಆ ಬ್ಯಾಂಕ್ ಶಾಖೆಗೆ ಕೊಡುವುದರ ಮುಖಾಂತರ ಗ್ರಾಮೀಣ ಅಭಿವೃದ್ಧಿಯ ಉಸ್ತುವಾರಿಯನ್ನು ಬ್ಯಾಂಕುಗಳು ಮಾಡುವಂತಾದಾಗ ಗ್ರಾಮೀಣ ಅಭಿವೃದ್ಧಿ ಸಾಧ್ಯ ಎಂಬ ವಿಚಾರವನ್ನು ಈ ಸಭೆಯಲ್ಲಿ ಅನೇಕ ಅಧಿಕಾರಿಗಳು ವ್ಯಕ್ತಪಡಿಸಿದರು. ತಜ್ಞರ ಈ ಕ್ರಾಂತಿಕಾರಿ ವಿಚಾರವನ್ನು ರಿಸರ್ವ್ ಬ್ಯಾಂಕು ಮತ್ತು ಸರಕಾರ ಒಪ್ಪಿ ಈ ಯೋಜನೆಯನ್ನು ಸಮಗ್ರವಾಗಿ ಅಧ್ಯಯನ ಮಾಡಿ ಅನುಷ್ಠಾನಕ್ಕೆ ತರಲು ಸಲಹೆ/ಸೂಚನೆಗಳನ್ನು ನೀಡುವಂತೆ ತಜ್ಞರ ಒಂದು ತಂಡವನ್ನು ಡಾ॥ ಪಿ. ಡಿ. ಓರ್ಝಾರವರ ನೇತೃತ್ವದಲ್ಲಿ ನೇಮಕ ಮಾಡಲಾಯಿತು. ಈ ತಂಡ ಅನೇಕ ಅಧ್ಯಯನಗಳನ್ನು ನಡೆಸಿ ತನ್ನ ವರದಿ ಸಲ್ಲಿಸಿತು. ತಂಡದ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ರಿಸರ್ವ್ ಬ್ಯಾಂಕು ಎಲ್ಲಾ ಬ್ಯಾಂಕುಗಳಿಗೆ ಈ ಮುಂದಿನ ಪ್ರಮುಖ ಸೂಚನೆಗಳನ್ನು ನೀಡಿತು. ಹಂತಹಂತವಾಗಿ ಬ್ಯಾಂಕುಗಳು ಮಾಡಬೇಕಾದ ಕೆಲಸ ಈ ರೀತಿ ಇದೆ:

## ನಾಲ್ಕು ಹಂತಗಳು

ಮೊದಲನೆಯ ಹಂತದಲ್ಲಿ ಈ ಯೋಜನೆಯನ್ವಯ ಪ್ರತಿ ವಾಣಿಜ್ಯ ಬ್ಯಾಂಕು ಮತ್ತು ಗ್ರಾಮೀಣ ಬ್ಯಾಂಕಿನ ಹಳ್ಳಿ ಹಾಗೂ ಅರೆನಗರ ಪ್ರದೇಶದ ಪ್ರತಿ ಶಾಖೆಗೂ ಕೆಲವು ನಿರ್ದಿಷ್ಟ ಪ್ರದೇಶವನ್ನು ನಿಗದಿಪಡಿಸುವುದು. ಶಾಖೆಗೆ ಸಮೀಪವಿರುವ ಸುಮಾರು 15–20 ಹಳ್ಳಿಗಳ ಒಂದು ಗುಂಪು ಸೇರಿಸಿ ಈ ಪ್ರದೇಶವನ್ನು ರಚಿಸಲಾಗುತ್ತದೆ. ಸಾಮಾನ್ಯವಾಗಿ ಇಂತಹ ಹಳ್ಳಿಗಳ ಆಯ್ಕೆ ಮಾಡುವಾಗ ಒಂದೇ ಮಂಡಲ ಅಥವಾ ಒಂದೇ ಪಂಚಾಯ್ತಿ ಪ್ರದೇಶದ ವ್ಯಾಪ್ತಿಯೆಲ್ಲಿರುವ ಹಳ್ಳಿಗಳ ಒಂದು ಗುಂಪು ಮಾಡಲಾಗುವುದು. ಒಂದು ಪಕ್ಷ ಇಂತಹ ಹಳ್ಳಿಗಳ ಸಮೀಪ ಒಂದಕ್ಕಿಂತ ಜಾಸ್ತಿ ಬ್ಯಾಂಕುಗಳಿದ್ದಲ್ಲಿ, ಹಳ್ಳಿಯಲ್ಲಿ ಜಾಸ್ತಿ ಜನರು ಯಾವ ಬ್ಯಾಂಕಿನಿಂದ ಸಾಲ ತೆಗೆದುಕೊಂಡಿದ್ದಾರೋ ಆ ಬ್ಯಾಂಕಿಗೇ ಆ ಹಳ್ಳಿಯನ್ನು ವಹಿಸಿಕೊಡಲಾಗುವುದು. ಯಾವ ಬ್ಯಾಂಕಿನ ಯಾವ ಶಾಖೆಗೆ ಯಾವ್ಯಾವ ಹಳ್ಳಿಗಳನ್ನು ಕೊಡುವುದು ಎಂಬುದನ್ನು ರಿಸರ್ವ್ ಬ್ಯಾಂಕಿನ ಅಗ್ರ ಜಿಲ್ಲಾ ವ್ಯವಸ್ಥಾಪಕರ ನೇತೃತ್ವದಲ್ಲಿ ಜಿಲ್ಲೆಯ ಅಗ್ರಬ್ಯಾಂಕು ಅಧಿಕಾರಿ ಹಾಗೂರಾಷ್ಟ್ರೀಯ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಅಧಿಕಾರಿಗಳನ್ನೊಳಗೊಂಡ ಸಮಿತಿಯು ಸಭೆ ಸೇರಿ ನಿರ್ಣಯಿಸುತ್ತದೆ. ಈ ನಿರ್ಣಯವನ್ನು ಸಂಬಂಧಪಟ್ಟ ಬ್ಯಾಂಕಿಗೆ ಅಗ್ರ ಬ್ಯಾಂಕು ತಿಳಿಸುತ್ತದೆ.

ಎರಡನೆಯ ಹಂತದಲ್ಲಿ ಸಂಬಂಧಪಟ್ಟ ಶಾಖೆಯ ವ್ಯವಸ್ಥಾಪಕರು ತಮಗೆ ಕೊಟ್ಟ ಹಳ್ಳಿಗಳ ಪೂರ್ಣ ಮಾಹಿತಿ ಸಂಗ್ರಹಿಸಬೇಕು. ಆ ಹಳ್ಳಿಯ ಜನರ ಆದಾಯ, ಅವರ ಚಟುವಟಿಕೆಗಳು, ಆರ್ಥಿಕ ಸ್ಥಿತಿಗತಿ, ಲಭ್ಯವಿರುವ ಸಂಪನ್ಮೂಲಗಳು, ಅದನ್ನು ಉತ್ತಮಪಡಿಸಬಹುದಾದ ವಿಧಾನ, ಹಳ್ಳಿಯಲ್ಲಿರುವ ಬ್ಯಾಂಕುಗಳು, ಸೇವಾ ಸಹಕಾರಿ ಸಂಘ, ಇತ್ಯಾದಿ ಹತ್ತು ಹಲವು ವಿಚಾರಗಳ ಬಗ್ಗೆ ವಿವರವಾದ ಮಾಹಿತಿ ಸಂಗ್ರಹಿಸಬೇಕು. ಈ ಮಾಹಿತಿಯ ಜೊತೆಗೆ ಕಂದಾಯ ಇಲಾಖೆ ಮತ್ತು ಜಿಲ್ಲಾ ಕೈಗಾರಿಕಾ ಕೇಂದ್ರಗಳಲ್ಲಿ ಸಿಗಬಹುದಾದ ವಿವರಗಳನ್ನು ಸಂಗ್ರಹಿಸುವುದು ಅಪೇಕ್ಷಣೀಯ.

ಮೂರನೆಯ ಹಂತದಲ್ಲಿ ಶಾಖಾ ವ್ಯವಸ್ಥಾಪಕರು ಪ್ರತಿ ಹಳ್ಳಿಯ ವಾರ್ಷಿಕ ಉದರಿ ಯೋಜನೆಯನ್ನು (Annual Credit Plan) ಸಿದ್ಧಪಡಿಸಬೇಕು. ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ಹಳ್ಳಿಯ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸುವ ಹಾಗೂ ಜನರ ಆವಶ್ಯಕತೆಯನ್ನು ಪೂರೈಸಲು ಸಹಾಯವಾಗುವಂತಹ ರೀತಿಯಲ್ಲಿ ಈ ಯೋಜನೆ ಸಿದ್ಧವಾಗಬೇಕು. ಕೃಷಿ ಹಾಗೂ ಕೃಷಿಗೆ ಸಂಬಂಧಿಸಿದ ಚಟುವಟಿಕೆಗಳಿಗೆ ವಾರ್ಷಿಕ ಉದರಿ ಯೋಜನೆಯಲ್ಲಿ ಆದ್ಯತೆ ನೀಡಬೇಕು. ಇದನ್ನು ಅಂತಿಮವಾಗಿ ನಿರ್ಣಯಿಸುವ ಮೊದಲು ಕ್ಷೇತ್ರ ಅಭಿವೃದ್ಧಿ ಅಧಿಕಾರಿಗಳೊಂದಿಗೆ ಯಾವ ಚಟುವಟಿಕೆಗೆ ಎಷ್ಟು ಹಣ ಮೀಸಲಿಡಬಹುದು ಎಂಬುದರ ಬಗ್ಗೆ ಚರ್ಚಿಸಿ ನಿರ್ಣಯಿಸುವುದು ಉತ್ತಮ. ಈ ಯೋಜನೆ ಸಿದ್ಧಪಡಿಸುವಾಗ ಭೂ ಅಡಮಾನ ಬ್ಯಾಂಕು ಮತ್ತು ಪ್ರಾಥಮಿಕ ಸಹಕಾರಿ ಸಂಘ ಮೊದಲಾದ ಸಂಸ್ಥೆಗಳಿಂದ ಸಾಲಪಡೆದದ್ದನ್ನು ಗಮನದಲ್ಲಿಟ್ಟುಕೊಳ್ಳಬೇಕು. ನಿಗದಿತವಾದ ಬ್ಯಾಂಕಲ್ಲದೆ ಬೇರೆ ಬ್ಯಾಂಕಿನಿಂದ ಈಗಾಗಲೇ ಯಾರಾದರೂ ಸಾಲ ತೆಗೆದುಕೊಂಡಿದ್ದ ಪಕ್ಷದಲ್ಲಿ ಆ ಸಾಲವನ್ನು ಚುಕ್ತ ಮಾಡಿದ ನಂತರ ಹೊಸ ಸಾಲ ನೀಡಬಹುದು ಅಥವಾ ಬ್ಯಾಂಕುಗಳ ಮಧ್ಯೆ ಸಾಲದ ಮುಂದುವರಿಕೆಗೆ ಪರಸ್ಪರ ಒಪ್ಪಂದ ಮಾಡಿಕೊಳ್ಳಬೇಕು.

ಯಾವುದೇ ಯೋಜನೆ ಅಥವಾ ಅಭಿವೃದ್ಧಿ ಕಾರ್ಯಕ್ರಮ ಯಶಸ್ವಿಯಾಗಲು ಕೇವಲ ಸಹಾಯ ಹಸ್ತ ಇದ್ದರೆ ಸಾಲದು. ಫಲಾನುಭವಿಗಳು ಸಹಾಯವನ್ನು ಪ್ರಾಮಾಣಿಕವಾಗಿ ಹಾಗೂ ಪರಿಶ್ರಮದಿಂದ ಸದುಪಯೋಗ ಮಾಡುವುದು ಮುಖ್ಯ. ಫಲಾನುಭವಿಗಳು ಆರ್ಥಿಕ ಸಹಾಯದ ಸದುಪಯೋಗ ಮಾಡುತ್ತಾರೊ ಇಲ್ಲವೊ ಎಂಬುದನ್ನು ತಿಳಿಯಲು ಒಂದು ಸಮಿತಿ ರಚಿಸಬೇಕು. ಅಗ್ರ ಬ್ಯಾಂಕಿನ ಅಧಿಕಾರಿ ಈ ಸಮಿತಿಯ ಅಧ್ಯಕ್ಷರಾಗಿರುತ್ತಾರೆ. ಆ ಕ್ಷೇತ್ರದಲ್ಲಿರುವ ಎಲ್ಲಾ ಬ್ಯಾಂಕುಗಳು, ಜಿಲ್ಲಾ ಕೈಗಾರಿಕಾ ಕೇಂದ್ರ, ಕ್ಷೇತ್ರ ಅಭಿವೃದ್ಧಿ ಅಧಿಕಾರಿ, ಕೈಗಾರಿಕೆ ಕೃಷಿಗಳ ವಿಸ್ತರಣಾಧಿಕಾರಿಗಳು ಇದರ ಸದಸ್ಯರು. ಫಲಾನುಭವಿಗಳ ಮೇಲುಸ್ತುವಾರಿಯ ಜೊತೆಗೆ ಬ್ಯಾಂಕುಗಳು ಮಾಡಬೇಕಾದ ಕಾರ್ಯದ ಬಗ್ಗೆ ಸಲಹೆ ನೀಡುವುದು, ಬ್ಯಾಂಕುಗಳು ಕರ್ತವ್ಯ ನಿರ್ವಹಿಸುವಲ್ಲಿ ಏನಾದರೂ ತೊಂದರೆ ಇದ್ದರೆ ಅದಕ್ಕೆ ಪರಿಹಾರ ಕಂಡುಹಿಡಿಯುವುದು, ಸರಕಾರದ ಕಾರ್ಯಕ್ರಮಗಳಾದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ವಿದ್ಯಾವಂತ ನಿರುದ್ಯೋಗಿ ತರುಣರಿಗೆ ಸ್ವಂತ ಉದ್ಯೋಗ ಯೋಜನೆ (SEEUY) ಮೊದಲಾದವಕ್ಕೆ ಬ್ಯಾಂಕಿನ ಸಹಾಯ ಅಪೇಕ್ಷಿತ ಪ್ರಮಾಣದಲ್ಲಿ ಸಿಗುತ್ತಿದೆಯೆ ? ಎಂಬುದನ್ನು ಅಧ್ಯಯನ ಮಾಡಿ ವಿಮರ್ಶೆ ಮಾಡುವುದು, ಆ ಪ್ರದೇಶದಲ್ಲಿ ಹೊಸ ಬ್ಯಾಂಕು ಆರಂಭವಾದಲ್ಲಿ ಅದಕ್ಕೆ ಹಳ್ಳಿಗಳನ್ನು ನಿಗದಿಪಡಿಸುವುದು ಮೊದಲಾದ ಕೆಲಸಗಳನ್ನು ಈ ಸ್ಥಳೀಯ ಸಮಿತಿ ಮಾಡುವುದು. ಇದು ಈ ಯೋಜನೆಯ ನಾಲ್ಕನೆಯ ಹಂತ.

## ಅನುಕೂಲಗಳು

ಈ ಯೋಜನೆ ಭಾರತೀಯ ಸ್ಟೇಟ್ ಬ್ಯಾಂಕು ಅಳವಡಿಸಿಕೊಂಡಿದ್ದ ಹಳ್ಳಿಗಳ ದತ್ತು ಯೋಜನೆಗೆ ಬಹಳ ಸಮೀಪವಾಗಿದ್ದರೂ ಕೆಲವು ವಿಧದಲ್ಲಿ ಭಿನ್ನವಾಗಿದೆ. ಈ ಯೋಜನೆಯಡಿಯಲ್ಲಿ ಹಿಂದುಳಿದ, ಮುಂದುವರಿದ, ಸಣ್ಣ ಹಾಗೂ ದೊಡ್ಡ ಹಳ್ಳಿಗಳೂ ಬರುತ್ತವೆ. ಯೋಜನೆಯ ಕಾರ್ಯಗತಿ ಹಳ್ಳಿಯಿಂದ ಪ್ರಾರಂಭವಾಗಿ ಜಿಲ್ಲಾ ಹಾಗೂ ರಾಷ್ಟ್ರಮಟ್ಟಕ್ಕೆ ಏರುತ್ತದೆ.

ಬ್ಯಾಂಕುಗಳೇ ಹಳ್ಳಿಯ ಪೂರ್ತಿ ಮಾಹಿತಿ ಸಂಗ್ರಹಿಸುವುದರಿಂದ ಬ್ಯಾಂಕು ಸಾಲ ನೀಡುವುದು ಸುಲಭ. ಒಂದೇ ರೀತಿಯ ಉದ್ಯಮಕ್ಕೆ ಹೆಚ್ಚು ಸಾಲ ಸೇರಿಹೋಗುವುದಿಲ್ಲ. ಬಂದು ಹಳ್ಳಿಯಲ್ಲಿ ಒಂದು ಉದ್ಯಮಕ್ಕೆ ಸಾಲ ನೀಡಿದರೆ, ಆ ಹಳ್ಳಿಯಲ್ಲಿ ಆ ಉದ್ಯಮದ ಆವಶ್ಯಕತೆ, ಅದಕ್ಕೆ ಬೇಕಾಗುವ ಪದಾರ್ಥಗಳು, ಮಾರುಕಟ್ಟೆಯ ಸೌಲಭ್ಯ ಮುಂತಾದವುಗಳ ಬಗ್ಗೆ ಬ್ಯಾಂಕಿನಲ್ಲಿ ಪೂರ್ಣ ವಿವರ ಇರುವುದರಿಂದ ಆ ಉದ್ಯಮಕ್ಕೆ ಸಾಲ ನೀಡುವುದರ ಔಚಿತ್ಯದ ಬಗ್ಗೆ ಬ್ಯಾಂಕು ಸರಿಯಾದ ನಿರ್ಣಯ ತೆಗೆದುಕೊಳ್ಳಲು ಸಾಧ್ಯವಾಗುತ್ತದೆ. ಇದರಿಂದ ಆವಶ್ಯಕತೆಗಿಂತ ಹೆಚ್ಚಿಗೆ ಯಾವ ವ್ಯಾಪಾರ ಉದ್ಯಮಕ್ಕೂ ಹೆಚ್ಚು ಉದರಿ ದೊರೆಯುವುದಿಲ್ಲ.

ಬ್ಯಾಂಕು ತನಗೆ ವಹಿಸಿಕೊಟ್ಟ ಹಳ್ಳಿಗಳಿಗೆ ಮಾತ್ರ ಸಾಲ ನೀಡುವುದರಿಂದ ಸಾಲದ ಉಪಯೋಗದ ಬಗ್ಗೆ ತಿಳಿದುಕೊಳ್ಳುವುದು ಸುಲಭ ಮತ್ತು ಇದರಿಂದ ಸಾಲದ ಮರುಪಾವತಿಯೂ ಉತ್ತಮಗೊಳ್ಳುತ್ತದೆ. ಸಾಲದ ಮರುಪಾವತಿ ಸರಿಯಾಗಿ ಆಗದಿದ್ದರೆ ಬ್ಯಾಂಕಿನ ಅಧಿಕಾರಿಗಳು ತಮ್ಮ ಮೇಲಧಿಕಾರಿಗಳಿಗೆ ಉತ್ತರಿಸಬೇಕಾಗಿರುವುದರಿಂದ ಬ್ಯಾಂಕಿನ ಅಧಿಕಾರಿಗಳು ಹೆಚ್ಚು ನಿಷ್ಠೆಯಿಂದ ಹಳ್ಳಿಗಳ ಅಭಿವೃದ್ಧಿ ಕಾರ್ಯದಲ್ಲಿ ಭಾಗವಹಿಸುತ್ತಾರೆ.

## ಬ್ಯಾಂಕಿನ ಸಮಸ್ಯೆಗಳು

ಈ ಯೋಜನೆ ಒಂದು ಒಳ್ಳೆಯ ಯೋಜನೆಯಾದರೂ ಇದನ್ನು ಅನುಷ್ಠಾನಕ್ಕೆ ತರುವಲ್ಲಿ

ಮತ್ತು ತಂದ ಅನಂತರ ಬ್ಯಾಂಕುಗಳೇ ಅಲ್ಲದೆ ಗ್ರಾಹಕರೂ ಕೆಲವು ಸಮಸ್ಯೆಗಳನ್ನು ಎದುರಿಸ ಬೇಕಾಗಬಹುದು.

ಮೊದಲನೆಯದಾಗಿ, ಮಾಹಿತಿ ಸಂಗ್ರಹಣೆ. ಏಕೆಂದರೆ ಗ್ರಾಮೀಣ ಪ್ರದೇಶದಲ್ಲಿರುವ ಬ್ಯಾಂಕು ಗಳು ಸಣ್ಣವು. ಅಲ್ಲಿರುವ ಉದ್ಯೋಗಿಗಳೂ ಕಡಿಮೆ. ಮಾಹಿತಿ ಸಂಗ್ರಹಿಸುವುದಕ್ಕೆ ಹೆಚ್ಚು ಜನ ಬೇಕಾಗುವರು. ಇದರಿಂದ ಹಲವು ಬ್ಯಾಂಕುಗಳು ತಮ್ಮ ಪಟ್ಟಣ ಪ್ರದೇಶದ ಶಾಖೆಗಳಿಂದ ತಾತ್ಕಾಲಿಕ ವಾಗಿ ಉದ್ಯೋಗಿಗಳನ್ನು ಕರೆತೊಳ್ಳಬೇಕಾಗು ವುದು. ಹೀಗೆ ಬಂದ ಸಿಬ್ಬಂದಿ ಎಷ್ಟು ಶಿಷ್ಟ್ಯದಿಂದ ಮಾಹಿತಿ ಸಂಗ್ರಹಿಸಬಹುದು ಎಂಬುದೇ ಸಮಸ್ಯೆ.

ಎರಡನೆಯದಾಗಿ, ಹಳ್ಳಿಗಳ ಹಂಚಿಕೆ. ಕೆಲವು ಪ್ರದೇಶಗಳಲ್ಲಿ ಹಳ್ಳಿಗಳ ಸಂಖ್ಯೆಗಿಂತ ಬ್ಯಾಂಕು ಶಾಖೆಗಳೇ ಹೆಚ್ಚಿವೆ. ಉದಾ: ಕೇರಳ, ಗೋವಾ ಮುಂತಾದ ಕಡೆ ಬ್ಯಾಂಕ್ ಶಾಖೆಗಳೇ ಹಳ್ಳಿಗಿಂತ ಹೆಚ್ಚಿರುವುದರಿಂದ ಒಂದು ಬ್ಯಾಂಕ್ ಶಾಖೆಗೆ ಒಂದು ಹಳ್ಳಿಯೂ ದೊರೆಯದ ಇರುವ ಸಾಧ್ಯತೆ ಇದ್ದರೆ, ಇನ್ನು ಕೆಲವು ಕಡೆ, ಉತ್ತರ ಭಾರತದಲ್ಲಿ, ಒಂದು ಶಾಖೆಗೆ 50–60 ಹಳ್ಳಿಗಳು ದೊರೆಯುತ್ತವೆ. ಇಂಥ ಕಡೆ ಬ್ಯಾಂಕ್ ಶಾಖೆಗಳು ಮುಂದೆ ಬರಬಹು ದಾದರೂ ಈಗ ಅಷ್ಟು ಹಳ್ಳಿಗಳಿಗೆ ಸಾಲ ನೀಡಲು ಸಾಧ್ಯವೆ? ಆ ಸಾಲದ ಮರುಪಾವತಿ ಎಂತು ಎಂಬುದು ದೊಡ್ಡ ಸಮಸ್ಯೆಯಾಗೇ ಉಳಿದಿದೆ.

ಇದರೊಂದಿಗೇ ಉದ್ಭವಿಸುವ ಇನ್ನೊಂದು ಸಮಸ್ಯೆ ಎಂದರೆ, ಒಂದು ಹಳ್ಳಿಯ ಹತ್ತಿರ ಹಲವು ಬ್ಯಾಂಕುಗಳಿದ್ದು ಆ ಹಳ್ಳಿ ಆರ್ಥಿಕವಾಗಿಯೂ ಮುಂದುವರಿದಿದ್ದರೆ ಆ ಪ್ರದೇಶದಲ್ಲಿರುವ ಎಲ್ಲಾ ಬ್ಯಾಂಕುಗಳೂ ಆ ಹಳ್ಳಿ ತಮಗೆ ಬೇಕೆಂದು ಕೇಳುವುದರಲ್ಲಿ ಅನುಮಾನವಿಲ್ಲ. ಈ ಸಮಸ್ಯೆಗೆ ರಿಸರ್ವ್ ಬ್ಯಾಂಕು ಯಾವ ಪರಿಹಾರವನ್ನೂ ಸೂಚಿಸಿಲ್ಲ.

ಈ ಯೋಜನೆ ಅನುಷ್ಠಾನಕ್ಕೆ ಬಂದ ಅನಂತರ ಈಗಿರುವ ಕೃಷಿ ಅಭಿವೃದ್ಧಿ ಶಾಖೆಗಳು ಮತ್ತು ಕೃಷಿ ಅಭಿವೃದ್ಧಿ ವಿಭಾಗಗಳ ಕೆಲಸವೇನು ಎಂಬುದು ಒಂದು ಪ್ರಶ್ನೆ. ತಾತ್ಕಾಲಿಕವಾಗಿ ಈ ಶಾಖೆಗಳಿಗೆ ಕೆಲವು ಹಳ್ಳಿಗಳನ್ನು ನೀಡಿದ್ದರೂ ಕ್ರಮೇಣ ಈ ಶಾಖೆಗಳು ತಮ್ಮ ಪ್ರಾಮುಖ್ಯ ಅಥವಾ ಅವುಗಳ ಮೂಲ ಉದ್ದೇಶವನ್ನೇ ಕಳೆದುಕೊಳ್ಳುವಂತಾಗುತ್ತದೆ.

ಬ್ಯಾಂಕಿನ ಅಧಿಕಾರಿಗಳು ಈಗ ಎದುರಿಸು ತ್ತಿರುವುದಕ್ಕಿಂತ ಹೆಚ್ಚು ರಾಜಕೀಯ ಒತ್ತಡಕ್ಕೆ ಒಳಗಾಗಬೇಕಾಗುವ ಸಾಧ್ಯತೆ ಇದೆ. ಇದರ ಜೊತೆ ಹಳ್ಳಿಯಲ್ಲಿರುವ ರಾಜಕೀಯ ಗುಂಪುಗಾರಿಕೆಯಿಂದ ಬ್ಯಾಂಕಿನ ಆಸ್ತಿಪಾಸ್ತಿಗೆ ನಷ್ಟ ಒದಗುವ ಸಂದರ್ಭವೂ ಉಂಟಾಗಬಹುದು. ಇದಲ್ಲದೆ ಹಲವು ಬಾರಿ ಬ್ಯಾಂಕಿನ ಅಧಿಕಾರಿಗಳ ಸ್ವಂತ ಆಸ್ತಿಗೆ ನಷ್ಟ

17ನೇ ಪುಟ ನೋಡಿ]

# ಅಭಿವೃದ್ಧಿಶೀಲ ದೇಶಗಳಲ್ಲಿ ಹಣಕಾಸು ನೀತಿಯ ಸಡಿಲಿಕೆ

## ಕಡಿಮೆ ಅಭಿವೃದ್ಧಿಹೊಂದಿದ ದೇಶಗಳ ಹಣಕಾಸು ಮಾರುಕಟ್ಟೆಗಳು ಏಕೆ ಅದಕ್ಷವಾಗಿವೆ ಮತ್ತು ಅವನ್ನು ಹೇಗೆ ಸುಧಾರಿಸಬಹುದು

---

ಮೂಲ

**ಮೈಕೇಲ್ ಪಿ. ಡೂಲಿ ಮತ್ತು ಡೊನಾಲ್ಡ್ ಜೆ. ಮ್ಯಾಥಿಸನ್**

ಅನುವಾದ

**ಸರ್ವಮಂಗಳ,** ಕನ್ನಡ ಘಟಕ, ಮೈಸೂರು ಬ್ಯಾಂಕು, ಪ್ರಧಾನ ಕಛೇರಿ, ಬೆಂಗಳೂರು 9

**ಡಿ.ಎಸ್. ನಾಗೇಶ** ಅಧಿಕಾರಿ, ಕೇಂದ್ರ ಲೆಕ್ಕವಿಭಾಗ, ಮೈಸೂರು ಬ್ಯಾಂಕು, ಪ್ರಧಾನಕಛೇರಿ, ಬೆಂಗಳೂರು

**ಓ. ನೊ. ಲಿಂಗಧಾಳ,** ಅಧಿಕಾರಿ, ಮೈಸೂರು ಬ್ಯಾಂಕು, ಬೆಂಗಳೂರು ಶಾಖೆ, ಬೆಂಗಳೂರು 560002

**ಎಂ. ಎಸ್. ಪ್ರಭಾಕರ್,** ವ್ಯವಸ್ಥಾಪಕರು ಮೈಸೂರು ಬ್ಯಾಂಕು, ಬುಕ್ಕಾಪಟ್ಟಣ

**ಬಿ. ಎಸ್. ನಾಗಾನಂದ,** ಭಾರತೀಯ ಸ್ಟೇಟ್ ಬ್ಯಾಂಕ್, ಜಯಪ್ರಕಾಶ್ ನಗರ ಶಾಖೆ, ಬೆಂಗಳೂರು 560079

**ಧನಂಜಯ ಭಂಡಿ,** ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ, ಬೆಂಗಳೂರು 560002

**ಸುಬ್ರಹ್ಮಣ್ಯ ಕೆಗ್ರಿತ್ತಾಯ,** ಮೈಸೂರು ಬ್ಯಾಂಕು, ಪ್ರಾದೇಶಿಕ ಕಛೇರಿ, ಪ್ರದೇಶ II, ಮೈಸೂರು 570023

**ಕಮಲ,** ಮೈಸೂರು ಬ್ಯಾಂಕು, ಶಂಕರಪುರ ಶಾಖೆ, ಬೆಂಗಳೂರು 560004

**ಹೇಮಚಂದ್ರ,** ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್, ರಾಯಚೂರು 584101

**ರತ್ನಾವತಿ,** ಮೈಸೂರು ಬ್ಯಾಂಕು, ಕುಶಾಲನಗರ–57123

**ರಾಧಾಬಾಯಿ,** ಮೈಸೂರು ಬ್ಯಾಂಕು, ಮಲ್ಲೇಶ್ವರಂ ಶಾಖೆ, ಬೆಂಗಳೂರು 560003

**ಜಿ. ಎನ್. ನರಸಿಂಹಮೂರ್ತಿ,** ಉಪ ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ

**ಪಾ. ರಾಜಗೋಪಾಲ,** ಪ್ರಧಾನಕಾರ್ಯದರ್ಶಿ, ಸಮನ್ವಯ ಸಮಿತಿ

**ನೋ. ಕೃ. ಅನಂತಸ್ವಾಮಿ,** ಅಧ್ಯಕ್ಷರು, ಸಮನ್ವಯ ಸಮಿತಿ

**ಮೋಲಿನಮನಿ,** ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ಬೆಳಗಾವಿ

**ಕುಪ್ಪಣ್ಣ,** ಭಾರತೀಯ ಸ್ಟೇಟ್ ಬ್ಯಾಂಕ್, ಹುಲಸೂರು 585416

**ಗುಂಡೂರಾವ್,** ಭಾರತೀಯ ಸ್ಟೇಟ್ ಬ್ಯಾಂಕ್ ಸೇವಾ ಶಾಖೆ, ಬೆಂಗಳೂರು 560001

**ಪು. ಶ್ರೀ ಭಟ್ಟ,** ಅಭಿವೃತ ಭಾಷೆಗಳ ವಿಭಾಗ, ಭಾರತೀಯ ಸ್ಟೇಟ್ ಬ್ಯಾಂಕ್, ಪ್ರಧಾನ ಕಛೇರಿ, ಬೆಂಗಳೂರು–560001

**ಗಣೇಶ ಭಟ್,** ಮೈಸೂರು ಬ್ಯಾಂಕ್, ನರಸಿಂಹರಾಜಪುರ

---

ಬಡ್ಡಿ ದರಗಳ ನಿರ್ಧಾರಣೆ, ಉದರಿ ನೀಡಿ ಮತ್ತು ಹಣಕಾಸು ಮಧ್ಯಸ್ಥಿಕೆಯ ಒಟ್ಟಾರೆ ಪ್ರಮಾಣ, ಇವುಗಳಲ್ಲಿ ಮಾರುಕಟ್ಟೆಯ ಬಲಗಳ ಪಾತ್ರವನ್ನು ಹೆಚ್ಚಿಸಲು ಅನೇಕ ಅಭಿವೃದ್ಧಿಶೀಲ ದೇಶಗಳು 1970ರ ಮತ್ತು 1980ರ ದಶಕಗಳಲ್ಲಿ ಯತ್ನಿಸಿದವು. ಕೈಗಾರಿಕಾ ದೇಶಗಳ ಇಂಥವೆ ಯತ್ನಗಳ ನಿಟ್ಟಿನಲ್ಲಿ ಕೈಗೊಂಡ ಈ ಹಣಕಾಸು ವ್ಯವಸ್ಥೆಯ ಸುಧಾರಣೆಗಳ ಹಿಂದಿದ್ದ ಪ್ರೇರಣೆಗಳೆಂದರೆ, ಹಣಕಾಸು ವ್ಯವಸ್ಥೆಯ ದಕ್ಷತೆ–ಸ್ಥಿರತೆಗಳನ್ನು ಸುಧಾರಿಸುವ ಅಪೇಕ್ಷೆ ಮತ್ತು ಬಿಗಿಯಾಗಿ ನಿಯಂತ್ರಿಸಲಾದ ಹಣಕಾಸು ವ್ಯವಸ್ಥೆಯ ನಿರ್ವಹಣೆ ಹೆಚ್ಚು ಹೆಚ್ಚು ಕಷ್ಟಕರವಾಗುವಂತೆ ಮಾಡಿದ ಆಂತರಿಕ ಮತ್ತು ಬಾಹ್ಯಕಾರಣಗಳು. ಅನೇಕ ಅಭಿವೃದ್ಧಿಶೀಲ ದೇಶಗಳಲ್ಲಿ ಹಣಕಾಸು ಸಡಿಲಿಕೆಯಿಂದ ಹೆಚ್ಚು ದಕ್ಷ

ಮತ್ತು ಮಾರುಕಟ್ಟೆ ಅನುಸ್ಥಾಪಿತ ಹಣಕಾಸು ವ್ಯವಸ್ಥೆಗಳಿಗೆ ಯಶಸ್ವಿ ಪರಿವರ್ತನೆ ಆಗಲಿಲ್ಲ. ಕೈಗಾರಿಕಾ ದೇಶಗಳ ಅನುಭವ ಇಂತಹುದಲ್ಲ. ಅನುಭವದಲ್ಲಿಯ ಈ ಭಿನ್ನತೆಗೆ ವಿವರಣೆಯನ್ನು ಅಭಿವೃದ್ಧಿಶೀಲ ದೇಶಗಳಲ್ಲಿನ ಹಣಕಾಸು ವ್ಯವಸ್ಥೆಗಳ ವಿಭಿನ್ನ ಸ್ವರೂಪದಲ್ಲಿ ಕಾಣಬಹುದು.

## ಅದುಮಿಟ್ಟ ಹಣಕಾಸು ವ್ಯವಸ್ಥೆ

ಬಹುತೇಕ ಅಭಿವೃದ್ಧಿಶೀಲ ದೇಶಗಳಲ್ಲಿ ಅದುಮಿಟ್ಟ ಹಣಕಾಸು ವ್ಯವಸ್ಥೆಗಳ ಮತ್ತು ತಕ್ಕಮಟ್ಟಿಗೆ ತೀವ್ರವಾದ ಅಧಿಕೃತ ನಿಬಂಧನೆಗಳು ಇವೆ. ಆಡಳಿತಾತ್ಮಕ ನಿಯಮಗಳು ಹಾಗು ನಿಬಂಧನೆಗಳು ದೇಶದಿಂದ ದೇಶಕ್ಕೆ ಸಹಜವಾಗಿ ಭಿನ್ನವಾಗಿದ್ದರೂ ಅನೇಕ ನಿಬಂಧನಾತ್ಮಕ ಸಂರಚನೆಗಳ ಭಾಗವಾಗಿರುವ ಕೆಲವು ಅಂಶಗಳು ಇವೆ.

## ಬಡ್ಡಿ ದರಗಳು

ಬಹುತೇಕ ಎಲ್ಲ ಅಭಿವೃದ್ಧಿಶೀಲ ದೇಶಗಳಲ್ಲಿ ಸಾಲ ನೀಡಿಕೆ ಮತ್ತು ಠೇವಣಿ ದರಗಳ ಮೇಲೆ ಬಡ್ಡಿ ದರಗಳ ಗರಿಷ್ಠ ಮಿತಿಗಳು ಅಸ್ತಿತ್ವದಲ್ಲಿವೆ. ದೇಶೀಯ ಹಣಕಾಸು ಸಂಸ್ಥೆಗಳ ಪೂರ್ಣ ಸ್ವಾಮ್ಯ ಹೊಂದಿದ ಕೆಲವೇ ಜನರು ಅನಿರ್ಬಂಧಿತ ಬಡ್ಡಿ ದರಗಳನ್ನು ದುರುಪಯೋಗಪಡಿಸಿಕೊಳ್ಳುವ ಪ್ರವೃತ್ತಿ ಇರುವುದೇ ಕಾರಣದಿಂದ ಅಂತಹ ಗರಿಷ್ಠ ಮಿತಿಗಳನ್ನು ಅನೇಕ ಸಾರಿ ಸಮರ್ಥಿಸಿಕೊಳ್ಳಲಾಗಿದೆ. ಈ ಗರಿಷ್ಠ ಮಿತಿಗಳ ಫಲವಾಗಿ ಕೆಲವು ದೇಶಗಳಲ್ಲಿ, ವಿಶೇಷವಾಗಿ ತೀವ್ರ ಹಣದುಬ್ಬರವುಳ್ಳ ದೇಶಗಳಲ್ಲಿ, ಅಧಿಕ ಋಣಾತ್ಮಕ ನೈಜ ಬಡ್ಡಿ ದರಗಳು (ನೆಗೆಟಿವ್ ರಿಯಲ್ ಇಂಟರೆಸ್ಟ್ ರೇಟ್ಸ್) ಉಂಟಾಗಿವೆ ಹಾಗೂ ಸಾಲ ಮತ್ತು ಠೇವಣಿ ದರಗಳಲ್ಲಿ ವ್ಯಾಪಕ ಅಂತರ ಉಂಟಾಗಿದೆ. ಅಂತಹ ದರಗಳು ಬದಲಾಗುತ್ತಿರುವ ಆರ್ಥಿಕ ಪರಿಸ್ಥಿತಿಗೆ ಮತ್ತು ಹಣದುಬ್ಬರಕ್ಕೆ ನಿಧಾನವಾಗಿ ಹೊಂದಿಕೊಳ್ಳುವ ಪ್ರವೃತ್ತಿ ತೋರುತ್ತವೆ ಮತ್ತು ದೇಶೀಯ ಹಣಕಾಸು ಸಂಲೇಖಗಳ ಸಂಚಯನಕ್ಕೆ ಬಹುಶಃ ಯಾವುದೇ ಪ್ರೇರಣೆಯನ್ನು ಒದಗಿಸಲಾರದು.

## ಪೋರ್ಟ್‌ಫೋಲಿಯೊ ಆಯ್ಕೆ

ಪೋರ್ಟ್‌ಫೋಲಿಯೊ ಆಯ್ಕೆಯ ಮೇಲಣ ನಿರ್ಬಂಧಗಳು ಕಡಿಮೆ ಅಭಿವೃದ್ಧಿಹೊಂದಿದ ದೇಶಗಳಲ್ಲಿ ಸಂಘಟಿತ ಹಣಕಾಸು ವಲಯದ ಮೂಲಕ ಹರಿಯುವ ಸಂಪನ್ಮೂಲಗಳ ಹಂಚಿಕೆಯ ಮುಖ್ಯ ಸಾಧನಗಳಾಗಿವೆ. ನಿರ್ದಿಷ್ಟ ಚಟುವಟಿಕೆಗಳಿಗಾಗಿ ಹಣಕಾಸು ಸಂಸ್ಥೆಗಳು ನೀಡಬೇಕಾದ ಸಾಲ ಹಲವೊಮ್ಮೆ ನೆರವು ದರಗಳಲ್ಲಿ ಮೂಲಭೂತ ವಲಯಗಳಿಗೆ ನೀಡಲಾದ ಕೇಂದ್ರೀಯ ಬ್ಯಾಂಕಿನ ಪುನರ್‌ವಟಾವಣೆ ಮತ್ತು ನೇರ ಸ್ವಾಮ್ಯದ ಮೂಲಕ ಹಣಕಾಸು ಮಧ್ಯವರ್ತಿಗಳ ನಿಯಂತ್ರಣ ಇವನ್ನು ಕುರಿತ ನಿಬಂಧನೆಗಳನ್ನು ಹಲವೊಮ್ಮೆ ಒಳಗೊಂಡಿರುತ್ತದೆ. ಈ ಪಡಿತರ ಯೋಜನೆಗಳು ಗರಿಷ್ಠ ಉತ್ಪಾದಕ ವಿನಿಯೋಜನ ಗಣಗಳೊಂದಿಗೆ ಲಭ್ಯ ಸಂಪನ್ಮೂಲಗಳನ್ನು ಹೊಂದಿಸಲಾರದೆ ಹೋಗಬಹುದು. ಪ್ರತಿಯಾಗಿ ಸಂಪನ್ಮೂಲಗಳು ಸರ್ಕಾರದ ಬಜೆಟ್ ಕೊರತೆಗಳನ್ನು ತುಂಬುವಲ್ಲಿ ಕೊನೆಗೊಳ್ಳುತ್ತವೆ. ಅಥವಾ ವ್ಯಾಪಾರ ನಿರ್ಬಂಧಗಳ ಮೂಲಕ ಸಂರಕ್ಷಣೆಗೆ ಒಳಗಾದ ದೇಶೀಯ ಮಾರುಕಟ್ಟೆಗಳನ್ನು ಹೊಂದಿರುವ ಬೃಹತ್ ಪ್ರಮಾಣದ (ಹಲವೊಮ್ಮೆ ರಾಜ್ಯಾತೀತವಾದ) ಸಂಸ್ಥೆಗಳು ಕೈಗೊಳ್ಳುವ ಬಂಡವಾಳಸಾಂದ್ರ ಪರಿಯೋಜನೆಗಳತ್ತ ಹರಿಯುತ್ತವೆ. ಆಗ ಸಣ್ಣ ಹಾಗು ಮಧ್ಯಮ ಗಾತ್ರದ ಉದ್ಯಮಗಳು ಅನೌಪಚಾರಿಕ (ಅನಿರ್ಬಂಧಿತ) ಹಣಕಾಸು ಮಾರುಕಟ್ಟೆಗಳಿಂದ ಉದರಿಯನ್ನು ಅರಸುವುದು ಅನಿವಾರ್ಯವಾಗುತ್ತದೆ. ಅಥವಾ ದೇಶೀಯ ಹಾಗೂ ಅಂತರರಾಷ್ಟ್ರೀಯ ಹಣಕಾಸು ಮಾರುಕಟ್ಟೆಗಳೆರಡಕ್ಕೂ ಪ್ರವೇಶವಿಲ್ಲದ ಸ್ಥಿತಿಯಲ್ಲಿ ಸ್ವಯಂಧನಪೋಷಣೆಯನ್ನು ಹೆಚ್ಚು ಹೆಚ್ಚಾಗಿ ಅವಲಂಬಿಸಬೇಕಾಗುತ್ತದೆ. ಅಂತಹ ಉದ್ಯಮ ಸಂಸ್ಥೆಗಳಿಗೆ ಅವು ಉದರಿಯನ್ನು ಪಡೆದುಕೊಳ್ಳುವ ಅವಕಾಶ ವೆಚ್ಚವು (Opportunity Cost) ಪ್ರಕಟಿತ ಸಾಲ ಬಡ್ಡಿ ದರಗಳಿಗಿಂತ ಬಹಳ ಮಟ್ಟಿಗೆ ಅಧಿಕವಾಗಿರುತ್ತದೆ. ಮೇಲಾಗಿ ಅಂತಹ ನಿರ್ಬಂಧಿತ ಮಾರುಕಟ್ಟೆಯಲ್ಲಿ ಬ್ಯಾಂಕ್ ವ್ಯವಸ್ಥಾಪಕರು ಮತ್ತು ಸಾಲದ ಅಧಿಕಾರಿಗಳು ಸಾಲಕ್ಕೆ ಎಷ್ಟೊಂದು ಹೆಚ್ಚುವರಿ ಬೇಡಿಕೆಯನ್ನು ಎದುರಿಸುವರೆಂದರೆ ಅವರು ಸ್ಪರ್ಧೆಯಿಂದಾಗಿ ತಮ್ಮ ಉತ್ಪನ್ನವನ್ನು ಮಾರಾಟ ಮಾಡಲಾಗಲಿ, ಪ್ರತಿಫಲ ದರಗಳ ಮೇಲೆ ಸ್ಪರ್ಧಾತ್ಮಕ ಪರಿಯೋಜನೆಗಳ ಪೈಕಿ ಆಯ್ಕೆ ಮಾಡುವಲ್ಲಾಗಲಿ ಒತ್ತಾಯಕ್ಕೆ ಒಳಗಾಗದಿರಬಹುದು.

## ತೆರಿಗೆ ಮತ್ತು ಮೀಸಲು ಅಗತ್ಯಗಳು

ಅಧಿಕ ದ್ರವತ್ವ ಮತ್ತು ಅಗತ್ಯ ಮೀಸಲು ಅನುಪಾತಗಳ ಅಸ್ತಿತ್ವದಿಂದಲೂ ಹಣಕಾಸು ವ್ಯವಸ್ಥೆಯ ಮೇಲೆ ರಾಜ್ಯಕೋಶೀಯ ಅಧಿಕಾರಿಗಳು ವಿಧಿಸುವ ಪ್ರತ್ಯಕ್ಷ ಮತ್ತು ಪರೋಕ್ಷ ತೆರಿಗೆಗಳ ಹಾಗೂ ಸಹಾಯಧನಗಳ ಸಂಕೀರ್ಣ ಮಿಶ್ರವೂ ಹಣಕಾಸು ಸಂಸ್ಥೆಗಳ ಪೋರ್ಟ್‌ಫೋಲಿಯೊ ಆಯ್ಕೆಗಳ ಮೇಲೆ ಪ್ರಭಾವ ಬೀರುತ್ತವೆ. ಬಡ್ಡಿ ವರಮಾನ, ಬ್ಯಾಂಕ್ ಲಾಭಗಳು ಮತ್ತು ಕೆಲವು ಸಂದರ್ಭಗಳಲ್ಲಿ ಹಣಕಾಸು ವಹಿವಾಟುಗಳು, ಇವುಗಳ ಮೇಲಣ ನೇರ ತೆರಿಗೆ

---

# ಸೇವಾಕ್ಷೇತ್ರ ಅಭಿಗಮನ

[16ನೇ ಪುಟದಿಂದ ಮುಂದುವರಿದುದು

ವಾಗುವುದರ ಜೊತೆಗೆ ಅಧಿಕಾರಿಗಳ ಮೇಲೆ ಹಲ್ಲೆ ನಡೆಯುವ ಸಂದರ್ಭಗಳು ಬಂದರೂ ಆಶ್ಚರ್ಯವಿಲ್ಲ.

ಈ ಯೋಜನೆಯಂತೆ ಒಬ್ಬ ವ್ಯಕ್ತಿ ಒಂದೇ ಬ್ಯಾಂಕಿನಿಂದ ಸಾಲ ಪಡೆಯಬಹುದು. ಆದರೆ ಹಳ್ಳಿಯ ಗಡಿಗಳಲ್ಲಿ ವಾಸಿಸುವ ಜನ ಯಾವ ಬ್ಯಾಂಕಿಗೆ ಸೇರುತ್ತಾರೆ ಎಂಬುದು ಸಮಸ್ಯೆ. ಆಗ ಒಬ್ಬ ವ್ಯಕ್ತಿ ಬ್ಯಾಂಕಿಗೆ ಮೋಸ ಮಾಡಿ ಎರಡು ಬ್ಯಾಂಕಿನಿಂದಲೂ ಸಾಲ ಪಡೆದುಕೊಳ್ಳುವ ಸಾಧ್ಯತೆ ಇದೆ.

## ಗ್ರಾಹಕರ ಸಮಸ್ಯೆಗಳು

ಇವು ಬ್ಯಾಂಕಿನ ಸಮಸ್ಯೆಯಾದರೆ ಗ್ರಾಹಕರೂ ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗಬಹುದು. ಗ್ರಾಹಕ ತನಗೆ ಬೇಕಾದ ಬ್ಯಾಂಕಿನಿಂದ ಸಾಲ ಪಡೆಯಲು ಸಾಧ್ಯವಿಲ್ಲ. ಅವನು ತನ್ನ ಹಳ್ಳಿಗೆ ನೀಡಿರುವ ಬ್ಯಾಂಕಿನಿಂದ ಮಾತ್ರ ಸಾಲ ಪಡೆಯಬೇಕಾಗುವುದು. ಇದರಿಂದ ಬ್ಯಾಂಕಿನ ಸೇವಾ ಮಟ್ಟ ಕುಸಿಯುವ ಸಾಧ್ಯತೆ ಇದೆ. ಇದು ಒಂದು ರೀತಿಯ ಏಕಸ್ವಾಮ್ಯಕ್ಕೆ ಎಡೆಮಾಡಿಕೊಡುತ್ತದೆ. ತಮ್ಮ ಹಳ್ಳಿಗೆ ನೀಡಿರುವ ಬ್ಯಾಂಕಿನಿಂದ ಸಾಲ ಪಡೆಯಲು ಇಷ್ಟಪಡದ ಗ್ರಾಹಕರು ಈ ಯೋಜನೆಯನ್ನು ವಿರೋಧಿಸುವ ಸಂದರ್ಭ ಒದಗಿದರೂ ಒದಗಬಹುದು.

ರಿಸರ್ವ್ ಬ್ಯಾಂಕು ಸಾಲ ನೀಡುವುದಕ್ಕೆ ಈ ಯೋಜನೆಯನ್ನು ಹಮ್ಮಿಕೊಂಡಿದ್ದರೂ ಹಳ್ಳಿಯ ಗ್ರಾಹಕರು ತಮ್ಮ ಇತರ ಬ್ಯಾಂಕು ಸೌಲಭ್ಯಗಳಿಗೂ (ಠೇವಣಿ ಮುಂತಾದವು) ಆ ಬ್ಯಾಂಕನ್ನೆ ಅವಲಂಬಿಸಬೇಕೇ ಎಂಬ ಬಗ್ಗೆ ಎಲ್ಲೂ ಹೇಳಿಲ್ಲ. ಹಳ್ಳಿಯ ಠೇವಣಿದಾರ ತನ್ನ ಹಳ್ಳಿಯಲ್ಲಿರುವ ಬ್ಯಾಂಕಿನಲ್ಲಿ ಠೇವಣಿ ಇಡಲು ಇಷ್ಟಪಡದೆ ಇರಬಹುದು. ಆಗ ಅವನ ಠೇವಣಿ ಒಂದು ಬ್ಯಾಂಕಿನಲ್ಲಿ, ಅವನು ಸಾಲ ಪಡೆಯುವುದು ಇನ್ನೊಂದು ಬ್ಯಾಂಕಿನಿಂದ ಆಗುತ್ತದೆ. ಇದು ಬಹಳ ಗಂಭೀರ ಸಮಸ್ಯೆ.

ಇನ್ನು ಹಳ್ಳಿಗಳಲ್ಲಿರುವ ಸಹಕಾರಿ ಬ್ಯಾಂಕುಗಳ ಕೆಲಸವೇನು ? ಈ ಯೋಜನೆ ಜಾರಿಗೆ ಬಂದರೆ ಆ ಬ್ಯಾಂಕುಗಳಿಗೆ ಕೆಲಸವೇ ಇಲ್ಲದಂತಾಗುತ್ತದೆ. ಇದರ ಬಗ್ಗೆ ರಿಸರ್ವ್ ಬ್ಯಾಂಕು ಏನೂ ಹೇಳಿಲ್ಲ.

ಹೀಗೆ ಹಲವು ಹತ್ತು ಸಮಸ್ಯೆಗಳಿದ್ದರೂ ಅವಕ್ಕೆ ಸೂಕ್ತ ಪರಿಹಾರ ಕಂಡುಕೊಂಡರೆ ಇದು ಒಂದು ಉತ್ತಮ ಯೋಜನೆ. ಇಲ್ಲದಿದ್ದರೆ ಈಗಾಗಲೇ ಬಂದು ಹೋದ ಹತ್ತು ಹಲವು ಯೋಜನೆಗಳಲ್ಲಿ ಇದೂ ಒಂದಾಗುತ್ತದೆ. ಮೇಲೆ ಹೇಳಿದ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಕಂಡುಕೊಳ್ಳುತ್ತೇವೆಯೆ ? ಎಂಬುದು ಮಾತ್ರ ಯಕ್ಷಪ್ರಶ್ನೆಯಾಗಿಯೇ ಉಳಿದಿದೆ. ಈ ಪ್ರಶ್ನೆಯನ್ನು ಉತ್ತರಿಸಲು ಧರ್ಮರಾಯ ಯಾವಾಗ ಬರುವನೋ ಕಾದು ನೋಡಬೇಕು. 

ಗಳು, ಶೇರಿಗೆ ವರಮಾನಗಳ ಮುಖ್ಯ ಮೂಲಗಳಾಗಿವೆ. ಮೇಲಾಗಿ ದತ್ತ ಗರಿಷ್ಠ ಬಡ್ಡಿದರಗಳಲ್ಲಿ ಸರ್ಕಾರಿ ಬಜೆಟ್ ಕೊರತೆಗಳನ್ನು ತುಂಬಲು ಸಹಾಯಕವಾಗುವ ಸರ್ಕಾರಿ ಪ್ರತಿಭೂತಿಗಳಿಗೆ ಅಥವಾ 'ಅಧಿಕ ಶಕ್ತಿ'ಯ ಹಣಕ್ಕೆ ಸಿದ್ಧ ಬೇಡಿಕೆ ಬರುವಂತೆ ಅಧಿಕ ಮೀಸಲು ಹಾಗೂ ದ್ರವತ್ವ ಅನುಪಾತಗಳು ನೋಡಿಕೊಳ್ಳುತ್ತವೆ. ಇದರಿಂದಾಗಿ ಬೆಲೆಗಳ ಮಟ್ಟ ಏರಿದಂತೆ, ಬ್ಯಾಂಕುಗಳು ತಮ್ಮ ಮೀಸಲುಗಳ ಗಾತ್ರಗಳನ್ನು ಹೆಚ್ಚಿಸಿಕೊಳ್ಳುವುದು ಅಗತ್ಯವಾಗಿರುವುದರಿಂದ, ಹಣದುಬ್ಬರ ತೆರಿಗೆ ಆದಾಯವನ್ನು ಗಮನಾರ್ಹವಾಗಿ ಹೆಚ್ಚಿಸಿಕೊಳ್ಳಲು ಅವಕಾಶವನ್ನು ಉಂಟುಮಾಡುತ್ತವೆ. ಇದೇ ಸಮಯದಲ್ಲಿ ಠೇವಣಿ ವಿಮೆಯ ರೂಪದಲ್ಲಿ ಮತ್ತು ಅಂತಿಮ ಸಾಲಿಗನ ಪಾತ್ರ ವಹಿಸಿ ಪ್ರಾಧಿಕಾರಗಳು ಹಣಕಾಸು ವಹಿವಾಟುಗಳಿಗೆ ಅವ್ಯಕ್ತ ಸಹಾಯಧನಗಳನ್ನು ಒದಗಿಸುತ್ತವೆ.

## ಪರ್ಯಾಯ ಹಣಕಾಸು ಮಾರುಕಟ್ಟೆಗಳಿಗೆ ಪ್ರವೇಶ

ಅಧಿಕೃತ ಹಣಕಾಸು ವ್ಯವಸ್ಥೆಯ ಮೇಲೆ ಪರಿಣಾಮ ಉಂಟುಮಾಡುವ ನಿಬಂಧನೆಗಳು ಮತ್ತು ತೆರಿಗೆಗಳು ಬಾಹ್ಯ ಅಥವಾ ಅನೌಪಚಾರಿಕ ದೇಶೀಯ ಮಾರುಕಟ್ಟೆಗಳಲ್ಲಿ ತಮ್ಮ ಹಣಕಾಸು ಕಲಾಪಗಳನ್ನು ನಡೆಸಲು ದೇಶೀಯ ಬ್ಯಾಂಕ್ ಮತ್ತು ಬ್ಯಾಂಕೇತರ ಸಂಸ್ಥೆಗಳಿಗೆ ಬಲವಾದ ಪ್ರೇರಣೆಗಳನ್ನು ಸೃಷ್ಟಿಸಿವೆ. ಅಧಿಕತರ ಹುಟ್ಟುವಳಿಯಿಂದಾಗಿ ಈ ಪರ್ಯಾಯ ಮಾರುಕಟ್ಟೆಗಳತ್ತ ಠೇವಣಿದಾರರು ಆಕರ್ಷಿತರಾಗುತ್ತಾರೆ. ಅದರೆ ಉದರಿ ಪಡೆವರ ಕಾರಣದಿಂದಾಗಿ ದೇಶೀಯ ಮಾರುಕಟ್ಟೆಯಲ್ಲಿ (ನಿರವ್ಯಹಿತ ಬಡ್ಡಿದರಗಳಲ್ಲಿ ಕೂಡ) ತಾವು ಬಯಸುವ ಉದರಿಗಳನ್ನು ಪಡೆದುಕೊಳ್ಳಬಹುದೆಂದು ಸಾಲಗಾರರು ಕಂಡುಕೊಳ್ಳುತ್ತಾರೆ. ಅಲ್ಲದೆ ಅನೌಪಚಾರಿಕ ವಲಯದಲ್ಲಿನ ಹಣಕಾಸು ಮಾರುಕಟ್ಟೆ ವಹಿವಾಟುಗಳ ಮೇಲೆ ವಿಧಿಸಲಾದ ತೆರಿಗೆಗಳನ್ನು ತಪ್ಪಿಸಿಕೊಳ್ಳಲು ಇಂತಹ ಹಣಕಾಸು ವಹಿವಾಟುಗಳು ಈ ಸಂಸ್ಥೆಗಳಿಗೆ ಅವಕಾಶ ಮಾಡಿಕೊಡುತ್ತವೆ.

ಈ ತೆರಿಗೆಯ ತಳ ಕೊಚ್ಚಿಹೋಗುವುದನ್ನು ತಡೆಗಟ್ಟಲು ಅದುಮಿಟ್ಟ ಹಣಕಾಸು ವ್ಯವಸ್ಥೆಗಳುಳ್ಳ ಅಭಿವೃದ್ಧಿಶೀಲ ದೇಶಗಳ ಪ್ರಾಧಿಕಾರಗಳು ಬಂಡವಾಳದ ಒಳ ಹಾಗೂ ಹೊರ ಹರಿವುಗಳೆರಡರ ಮೇಲೂ ವ್ಯಾಪಕ ನಿಯಂತ್ರಣಗಳನ್ನು ಬಹಳ ಹಿಂದಿನಿಂದಲೂ ಹೊರಿಸುತ್ತಾ ಬರುತ್ತಿವೆ. ಮತ್ತು ಅನೌಪಚಾರಿಕ ವಲಯದಲ್ಲಿನ ಕರಾರುಗಳನ್ನು ಕಾನೂನಿಕವಾಗಿ ಜಾರಿಗೊಳಿಸಲಾಗದಂತೆ ಮಾಡಿವೆ.

## ಸಾಂದ್ರೀಕರಣ ಹಾಗೂ ಪ್ರವೇಶ

ಪ್ರವೇಶವನ್ನು ಬಹಳಷ್ಟು ನಿರ್ಬಂಧಿಸಲಾಗಿದೆ. ಹರಾಜಿನಲ್ಲಿ ಅತ್ಯಧಿಕ ಸವಾಲುದಾರನಿಗೆ ಹಕ್ಕುಗಳನ್ನು ನೀಡುವ ಬದಲು ಕೆಲವು ನಿಶ್ಚಿತ ಗುಂಪುಗಳಿಗೇ ನೀಡುವುದು ಸಾಮಾನ್ಯವಾಗಿದೆ. ಪ್ರವೇಶದ ಮೇಲೆ ವಿಧಿಸಿರುವ ಈ ಮಿತಿ ಮತ್ತು ದೇಶೀಯ ಹಣಕಾಸು ಸಂಸ್ಥೆಗಳ ವಿದೇಶಿ ಒಡೆತನದ ಮೇಲೆ ವಿಧಿಸಲಾದ ನಿರ್ಬಂಧಗಳು, ಇವೆರಡೂ ಕೂಡಿ ನಿರ್ಬಂಧಿತ ಬ್ಯಾಂಕಿಂಗ್ ಉದ್ಯಮದ ಸ್ವಲ್ಪಜನ ಸ್ವಾಮ್ಯ ಸಂರಚನೆಗೆ ಹಲವೊಮ್ಮೆ ಕಾರಣವಾಗಿವೆ.

1970ರ ದಶಕದಲ್ಲಿ ನಮ್ಮದ ಅಭಿವೃದ್ಧಿಶೀಲ ದೇಶಗಳ ಗುಂಪೊಂದರ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಆಗಿರುವ ಸಾಂದ್ರತೆಯ ಪ್ರಮಾಣ ಈ ಪಟ್ಟಿಕೆಗೆ ತಕ್ಕಮಟ್ಟಿಗೆ ಚಿತ್ರವತ್ತಾದ ನಿದರ್ಶನವಾಗಿದೆ.

ಒಂದೇ ಬ್ಯಾಂಕು ಎಲ್ಲ ಠೇವಣಿಯಲ್ಲಿ ⅓ ರಷ್ಟನ್ನು ಮತ್ತು ನಾಲ್ಕು ಅತ್ಯಂತ ದೊಡ್ಡ ಬ್ಯಾಂಕುಗಳು ಎಲ್ಲ ಠೇವಣಿಗಳ ಮುಕ್ಕಾಲರಷ್ಟು ಭಾಗವನ್ನು ಹೊಂದಿದ್ದವು. ಇದರ ಜೊತೆಗೆ ಕೆಲವು ದೇಶಗಳಲ್ಲಿ ಹಣಕಾಸು ಸಂಸ್ಥೆಗಳ ಒಡೆತನವನ್ನು ದೊಡ್ಡ ಕೈಗಾರಿಕಾ ಗುಂಪಿನ ಸೂತ್ರಧಾರಿ ಕಂಪನಿಗಳಿಗೆ ಕೊಡಲಾಗಿದೆ.

## ಹಣಕಾಸು ವ್ಯವಸ್ಥೆಯನ್ನು ಅದುಮಿಡುವುದರ ಪರಿಣಾಮಗಳು

ಅಭಿವೃದ್ಧಿಶೀಲ ದೇಶಗಳ ಪ್ರಾಧಿಕಾರಗಳು ಅದುಮಿಟ್ಟ ಹಣಕಾಸು ವ್ಯವಸ್ಥೆಯತ್ತ ಹಲವೊಮ್ಮೆ ಒಲವು ತೋರುತ್ತವೆ. ಏಕೆಂದರೆ ಸಂಪನ್ಮೂಲ ಹಂಚಿಕೆಯ ಮೇಲೆ ನಿಯಂತ್ರಣ ಹೊಂದಲು ಮತ್ತು ಹಣಕಾಸು ಮಧ್ಯಸ್ಥಗಾರಿಕೆಯ ಮೇಲೆ ತೆರಿಗೆ ವಿಧಿಸಲು ಅದಕ್ಕೆ ಅದರಿಂದ ಅವಕಾಶ ದೊರೆಯುತ್ತದೆ.

ಆ ಗುಣಲಕ್ಷಣಗಳು ಪ್ರಾಧಿಕಾರಗಳಿಗೆ ಎಷ್ಟೇ ಅಪೇಕ್ಷಣೀಯವೆಂದು ತೋರಬಹುದಾದರೂ ಖಾಸಗಿ ವಲಯದ ಮೇಲೆ ಅಂಥ ವ್ಯವಸ್ಥೆ ಹೇರುವ ವೆಚ್ಚಗಳು ಅಷ್ಟು ಸ್ಪಷ್ಟವಲ್ಲವಾದರೂ ಗಣನೀಯವಾಗಿವೆ.

## ವಿವಿಧೀಕರಣದ ಮಿತಿಗಳು

ಅಭಿವೃದ್ಧಿಶೀಲ ಅರ್ಥವ್ಯವಸ್ಥೆಗಳು ದೇಶೀಯ ನಿವಾಸಿಗಳಿಗೆ ತಮ್ಮ ವಿನಿಯೋಜನೆ ಪೋರ್ಟ್‌ಫೋಲಿಯೊಗಳನ್ನು ವಿವಿಧೀಕರಿಸಲು ಸಾಪೇಕ್ಷವಾಗಿ ಕಡಿಮೆ ಅವಕಾಶವನ್ನು ಸಾಮಾನ್ಯವಾಗಿ ಒದಗಿಸುತ್ತವೆ. ಕೆಲವೇ ಸರಕುಗಳ ರಫ್ತನ್ನು ಬಹಳವಾಗಿ ಅವಲಂಬಿಸುವ ಅಥವಾ ಕೆಲವೇ ಮಾರುಕಟ್ಟೆಗಳಿಗೆ ರಫ್ತು ಮಾಡುವ ಅರ್ಥವ್ಯವಸ್ಥೆಗಳಲ್ಲಿ, ಅಂತಹ ರಫ್ತುಗಳ ಬೆಲೆ ಅಥವಾ ಗಾತ್ರದಲ್ಲಿ ಆಗುವ ಬದಲಾವಣೆಗಳಿಂದಾಗಿ ಅಲ್ಲಿಯ ಎಲ್ಲ ವಲಯಗಳ ಆರ್ಥಿಕ ಚಟುವಟಿಕೆಯ ಮೇಲೆ ಪ್ರಭಾವಬೀರುತ್ತವೆ ಎಂಬ ಸಂಗತಿಯನ್ನು ಇದು ಭಾಗಶಃ ಬಿಂಬಿಸುತ್ತವೆ. ಆದ್ದರಿಂದ ವಿದೇಶಿ ಆಸ್ತಿಗಳಿಗೆ ಅಥವಾ ಉದರಿಗಳಿಗೆ ಪ್ರವೇಶವನ್ನು ಸೀಮಿತಗೊಳಿಸುವ ನಿಯಂತ್ರಣ ಇದ್ದಲ್ಲಿ ಹಣಕಾಸಿನ ಮತ್ತು ಹಣಕಾಸೇತರ ಸಂಸ್ಥೆಗಳೆರಡಕ್ಕೂ ಪೋರ್ಟ್‌ಫೋಲಿಯೊ ವಿವಿಧೀಕರಣ ಬಹುಮಟ್ಟಿಗೆ ಸೀಮಿತಗೊಳ್ಳಬಹುದು. ಇದರಿಂದಾಗಿ ದೇಶೀಯ ಪೋರ್ಟ್‌ಫೋಲಿಯೊ ಮಾಲೀಕರು ನಷ್ಟಸಂಭಾವ್ಯತೆಯನ್ನು ವಿವಿಧೀಕರಿಸಲು ವಿದೇಶೀ ಹಣಕಾಸು ಮಾರುಕಟ್ಟೆಗೆ ಪ್ರವೇಶವನ್ನು ಅರಸುತ್ತಾರೆ.

## ಆಸ್ತಿಗಳಿಗೆ ಸಂಬಂಧಿಸಿದ ಸೇವೆಗಳು

ಆಸ್ತಿಗಳಿಗೆ ಸಂಬಂಧಿಸಿದ ಸೇವೆಗಳು ಸಾಲವೊಂದರ ಮೌಲ್ಯಾಂಕನ ಮಾಡಲು ಮತ್ತು ಸಾಲ ನೀಡಿದ ಅನಂತರ ಸಾಲಗಾರರ ಬಗ್ಗೆ ಉಸ್ತುವಾರಿ ಮಾಡಲು ಅಗತ್ಯವಾದ ಮಾಹಿತಿಯನ್ನು ಸಂಗ್ರಹಿಸುವುದು ಆಸ್ತಿಗಳಿಗೆ ಸಂಬಂಧಿಸಿದ ಸೇವೆಗಳಲ್ಲಿ ಸೇರಿರುತ್ತದೆ. ಆದಾಗ್ಯೂ ಅದುಮಿಟ್ಟ ಹಣಕಾಸು ಮಾರುಕಟ್ಟೆಗಳಲ್ಲಿ ಇರುವ ಪೋರ್ಟ್‌ಫೋಲಿಯೊ ಆಯ್ಕೆಯನ್ನು ಕುರಿತಂತೆ ಜಾರಿಯಲ್ಲಿರುವ ನಿಯಮಗಳು ಮತ್ತು ನಿರ್ಬಂಧಗಳಿಂದಾಗಿ ಲಾಭಪ್ರದ ವಿನಿಯೋಜನೆಗಳಿಗೆ ಸಾಲಗಳನ್ನು ನೀಡುವುದಕ್ಕೆ ಲಾಭದಾಯಕವಲ್ಲದ ವಿನಿಯೋಜನೆಗಳಿಗೆ ನಿರಾಕರಿಸುವುದಕ್ಕೆ ಮತ್ತು ಅನುಕೂಲತಮ ಮಟ್ಟವನ್ನು ಸಾಧಿಸುವುದಕ್ಕೆ ಪ್ರೇರಣೆಗಳನ್ನು ಹಲವೊಮ್ಮೆ ತೆಗೆದುಹಾಕುತ್ತವೆ; ಅಥವಾ ಸೀಮಿತಗೊಳಿಸುತ್ತವೆ. ಹಣಕಾಸು ಸಂಸ್ಥೆಗಳ ಸಾಲ ನೀಡಿಕೆಯ ಗುಣದ ಬಗ್ಗೆ ಠೇವಣಿದಾರರು ಕಡಿಮೆ ಕಾಳಜಿ ವಹಿಸುವಂತೆ ಮಾಡುವ ಪ್ರವೃತ್ತಿಯುಳ್ಳ ಪರೋಕ್ಷ ಅಥವಾ ಪ್ರತ್ಯಕ್ಷ ಠೇವಣಿ ವಿಮೆಯ ಅಸ್ತಿತ್ವದಿಂದಲೂ ಈ ಪ್ರಕ್ರಿಯೆ ಪರಿಣಾಮಗೊಳ್ಳುತ್ತದೆ.

## ಹೊಣೆಗಳಿಗೆ ಸಂಬಂಧಿಸಿದ ಸೇವೆಗಳು

ಹೊಣೆಗಳಿಗೆ ಸಂಬಂಧಿಸಿದ ಸೇವೆಗಳು ವಹಿವಾಟುಗಳ ಇತ್ಯರ್ಥವನ್ನು ಮತ್ತು ಚಲಾರ್ಥ (ಕರೆನ್ಸಿ) ತಪಶೀಲುಗಳ ಹಿಡುವಳಿಯನ್ನು ಒಳಗೊಂಡಿರುತ್ತದೆ. ಅದುಮಿಟ್ಟ ಹಣಕಾಸು ವ್ಯವಸ್ಥೆಯಲ್ಲಿ ಈ ಸೇವೆಗಳನ್ನು ಸ್ಪಷ್ಟವಾಗಿ ಆಕರಿಸುತ್ತಾ ಬರಲಾಗಿದೆಯಾದರೂ ಸಂಘಟಿತ ವ್ಯವಸ್ಥೆಯ ಮೂಲಕ ಸಾಗುವ ಒಟ್ಟಾರೆ ಹಣಕಾಸು ಹರಿವುಗಳನ್ನು ವ್ಯವಸ್ಥೆಯಲ್ಲಿನ ಅದಕ್ಷತೆಗಳು ಮತ್ತು ಕರಾಧಾನಗಳನ್ನು ಉಂಟುಮಾಡುವ ಇಂತಹ ಪ್ರಮಾಣಕ್ಕೆ ಅವುಗಳ ಗಾತ್ರ ಸೀಮಿತವಾಗಿರುತ್ತದೆ. ಉದಾ: ದೇಶೀಯ ನಿವಾಸಿಗಳು ವಹಿವಾಟುಗಳನ್ನು ನಡೆಸುವ ಸಲುವಾಗಿ ವಿದೇಶಿ ಚಲಾರ್ಥಗಳನ್ನು ಹೊಂದಿರಬಹುದು.

## ಹಣಕಾಸು ವ್ಯವಸ್ಥೆಯ ಪರಿವರ್ತನ ಸೇವೆಗಳು

ಹಣಕಾಸು ನಿಗ್ರಹದಿಂದಾಗಿ ಬಹುಶಃ ಅತ್ಯಂತ ಪ್ರತಿಕೂಲಕರವಾದ ಪರಿಣಾಮಕ್ಕೆ ಒಳಗಾಗಿವೆ.

ವೈಯಕ್ತಿಕ ಸಾಲಗಾರರ ಮೇಲಣ ದ್ರವತ್ವಹೀನ ಕ್ಲೇಮುಗಳನ್ನು (Claims) ದ್ರವ ಠೇವಣಿಗಳಾಗಿ ಪರಿವರ್ತಿಸಲು ಈ ಸೇವೆಗಳು ನೆರವಾಗುತ್ತವೆ· ಸಾಲಗಾರರ ಮತ್ತು ಸಾಲಿಗರ ಬೇಡಿಕೆಗಳನ್ನು ಹೊಂದಿಸಲು ಇದು ಅವಕಾಶ ಮಾಡಿಕೊಡುತ್ತದೆ! ಹಣಕಾಸು ಸಂಸ್ಥೆಗಳು ಈ ಬೇಡಿಕೆಗಳನ್ನು ಅನುರೂಪಗೊಳಿಸುವುದನ್ನು ಮತ್ತು ನಷ್ಟ ಸಂಭಾವ್ಯತೆಯನ್ನು ಒಗ್ಗೂಡಿಸುವುದನ್ನು ಮತ್ತು ತತ್ಫಲವಾಗಿ ಪರಿವರ್ತನ ಸೇವೆಗಳ ಒಂದು ಸಂಪೂರ್ಣ ಗಣವನ್ನು ಒದಗಿಸುವುದನ್ನು ಪೋರ್ಟ್‌ಫೋಲಿಯೋ ಆಯ್ಕೆಯ ಮೇಲಿನ ನಿರ್ಬಂಧಗಳೂ ಬಡ್ಡಿ ದರ ಗರಿಷ್ಠ ಮಿತಿಗಳ ಅಸ್ತಿತ್ವವೂ ತಡೆಗಟ್ಟುತ್ತವೆ. ಹಣಕಾಸು ಸುಧಾರಣೆಗಳು ಕಳೆದ ಎರಡು ದಶಕಗಳಲ್ಲಿ ಏಶಿಯ ಮತ್ತು ಲ್ಯಾಟಿನ್ ಅಮೇರಿಕದ ಅಭಿವೃದ್ಧಿಶೀಲ ದೇಶಗಳಲ್ಲಿ ಕೈಗೊಳ್ಳಲಾದ ಹಣಕಾಸು ಸುಧಾರಣೆಗಳು ಜಾರಿಗೆ ತರಲಾದ ಕ್ರಮಗಳ ಬಗೆಗಳಿಗೆ ಸಡಿಲಿಕೆಯ ವೇಗಕ್ಕೆ ಮತ್ತು ಇತರ ನೀತಿಸಂಬಂಧಿ ಕ್ರಮಗಳೊಡನೆ ಸಮನ್ವಯದ ಮಟ್ಟಕ್ಕೆ ಸಂಬಂಧಿಸಿದಂತೆ ಗಣನೀಯವಾಗಿ ಭಿನ್ನವಾಗಿವೆ.

ಈ ಸುಧಾರಣೆಗಳ ಪರಿಣಾಮಗಳು ಭಿನ್ನವಾಗಿವೆ. ಕೆಲವು ಸುಧಾರಣೆಗಳು ವಿಸ್ತೃತ ಕಾಲಾವಧಿಯಲ್ಲಿ ಸಾಪೇಕ್ಷವಾಗಿ ಸ್ಥಿರವಾಗಿ ಉಳಿದುಕೊಂಡು ಬಂದಿವೆ (ಉದಾ : ಕೊರಿಯ ಗಣರಾಜ್ಯದಲ್ಲಿ). ಆದರೆ ಇತರ ಸುಧಾರಣೆಗಳು ಹಣಕಾಸು ಬಿಕ್ಕಟ್ಟುಗಳಲ್ಲಿ ಕೊನೆಗೊಂಡವು (ಉದಾ: ಅರ್ಜೆಂಟೀನಾ ಮತ್ತು ಚಿಲಿ). ತೊಂದರೆಗಳಲ್ಲಿ ಸಿಲುಕಿಕೊಂಡ ಹಣಕಾಸು ಸುಧಾರಣೆಗಳ ಬಗೆಗಿನ ಇತ್ತೀಚಿನ ಬಹಳಷ್ಟು ಬರಹಗಳು ಇಂಥ ತೊಂದರೆಗಳ ಮೂಲಗಳ ಮೇಲೆ ಬೆಳಕು ಚೆಲ್ಲುತ್ತವೆ. ಸರಕು ಮಾರುಕಟ್ಟೆಗಳ ಸಡಿಲಿಕೆ (ಉದಾ : ಸುಂಕಗಳ ಕಡಿತದ ಮೂಲಕ) ಮತ್ತು ಹಣಕಾಸು ಮಾರುಕಟ್ಟೆಗಳ ಸಡಲಿಕೆ ಇವುಗಳ ಪರಸ್ಪರ ಕ್ರಿಯೆಯನ್ನು ಈ ಬರಹಗಳು ನಿರ್ದಿಷ್ಟವಾಗಿ ಗಮನಿಸಿವೆ. ಈ ಸುಧಾರಣೆಗಳು ಅಂತಿಮವಾಗಿ ವಿಫಲಗೊಂಡಿದ್ದಕ್ಕೆ ಅಸಂಗತ ಸ್ಥೂಲ ಆರ್ಥಿಕ ನೀತಿಗಳು ಮುಖ್ಯ ಕಾರಣವೆಂದು ಸಾಮಾನ್ಯವಾಗಿ ವಾದಿಸಲಾಗಿದೆ. ಸರಕು ಮತ್ತು ಹಣಕಾಸು ಮಾರುಕಟ್ಟೆಗಳು ವಿಭಿನ್ನ ವೇಗಗಳಲ್ಲಿ ಹೊಂದಾವಣೆಗೊಳ್ಳುವುದರ ಫಲವಾಗಿ ಇಂತಹ ಅಸಂಗತಗಳು ಮುಖ್ಯವಾಗಿ ಉದ್ಭವಿಸುತ್ತಿದ್ದುವು. ಹಣಕಾಸು ಸುಧಾರಣೆಯೊಂದರ ಫಲವಾಗಿ ಉಂಟಾಗುವ ನೈಜ ವಿನಿಮಯ ದರ ಬದಲಾವಣೆಗಳಿಂದ ದೇಶೀಯ ಮತ್ತು ವಿದೇಶೀಯ ಸರಕುಗಳ ಮಾರುಕಟ್ಟೆಗಳ ಒಗ್ಗೂಡುವಿಕೆ ಇನ್ನಷ್ಟು ಕಷ್ಟಕರವಾಗುತ್ತದೆ.

ಸ್ಥೂಲ ಆರ್ಥಿಕ ನೀತಿ ಸಮನ್ವಯಾಂಗಗಳ ಚರ್ಚೆಗಳು ಸುಧಾರಣೆಗಳ ವೇಗ ಮತ್ತು ಕ್ರಮಗಳ ಬಗ್ಗೆ ಕೆಲವು ನಿರ್ಣಯಗಳಿಗೆ ಎಡೆಮಾಡಿಕೊಟ್ಟಿವೆ. ಉದಾ : (1) ದೊಡ್ಡ ಪ್ರಮಾಣದ ಕೊರತೆಗಳನ್ನು ತುಂಬುವುದರ ಪ್ರತಿಕೂಲ ಪರಿಣಾಮಗಳನ್ನು ನಿವಾರಿಸುವುದು ಕಷ್ಟವಾದ್ದರಿಂದ, ರಾಜ್ಯಕೋಶೀಯ ಅಸಮತೋಲಗಳನ್ನು ಕುರಿತು ಸಾಕಷ್ಟು ಮುಂಚೆಯೇ ವಿಚಾರ ಮಾಡಬೇಕು. (2) ವ್ಯಾಪಾರದ ಸುಧಾರಣೆಗಳು (ಉದಾ : ಸುಂಕದ ಇಳಿತಗಳು) ಕೂಡ ಮುಂಚೆಯೆ ಆಗಬೇಕು. ಆದರೆ ಈ ಬದಲಾವಣೆಗಳು ಶೀಘ್ರವಾಗಿ ಆಗಬೇಕೆ ಅಥವಾ ಕ್ರಮೇಣ ಬರುವಂತೆ ನೋಡಿಕೊಳ್ಳಬೇಕೆ ಎಂಬುದರ ಬಗ್ಗೆ ಗಣನೀಯವಾದ ಚರ್ಚೆ ನಡೆದಿದೆ. (3) ಸ್ಥಿತ್ಯಂತರಕಾಲದಲ್ಲಿ, ದೇಶೀಯ ಹಣಕಾಸು ವ್ಯವಸ್ಥೆಯನ್ನು ಸಂರಕ್ಷಿಸುವ ಸಲುವಾಗಿ, ವ್ಯಾಪಕವಾದ ಹಣಕಾಸು ಸುಧಾರಣೆಗಳನ್ನು ಕ್ರಮೇಣ ಬರುವಂತೆ ನೋಡಿಕೊಳ್ಳಬೇಕೆ ಎಂಬುವು ಈ ಅಂಶಗಳು. ಆದಾಗ್ಯೂ ಹೆಚ್ಚು ದಕ್ಷ ಮತ್ತು ಸ್ಥಿರವಾದ ಹಣಕಾಸು ವ್ಯವಸ್ಥೆ ಬರುವಂತೆ ಖಚಿತಪಡಿಸಿಕೊಳ್ಳಲು, ಸ್ಥೂಲ ಆರ್ಥಿಕನೀತಿಗಳ ಉತ್ತಮ ಸಮನ್ವಯವನ್ನು ಬಿಟ್ಟು, ತೆಗೆದುಕೊಳ್ಳಬಹುದಾದ ಇತರ ಕ್ರಮಗಳಿಗೆ ಕಡಿಮೆ ಗಮನವನ್ನು ಹರಿಸಲಾಗಿದೆ.

ಇಳಿಸಲಾದ ಅಪೇಕ್ಷಿತ ಮೀಸಲು ಅನುಪಾತಗಳು ಠೇವಣಿಗಳ ಕೆಲವು ನಿಶ್ಚಿತ ಬಗೆಗಳ ಮೇಲೆ ಬಡ್ಡಿದರಗಳ ಗರಿಷ್ಠಮಿತಿಯನ್ನು ತೆಗೆದುಹಾಕುವುದು, ಹಣಕಾಸು ವ್ಯವಸ್ಥೆಯೊಳಕ್ಕೆ ಹೆಚ್ಚು ಮುಕ್ತವಾದ ಪ್ರವೇಶ, ಪೋರ್ಟ್‌ಫೋಲಿಯೊ ನಿಗದಿ ನಿಯಮಗಳ ವಿಸರ್ಜನೆ ಹಾಗೂ ಬಾಹ್ಯ ಹಣಕಾಸು ವಹಿವಾಟುಗಳ ಮೇಲಣ ನಿಯಂತ್ರಣಗಳ ಸಡಿಲಿಕೆ—ಇವುಗನ್ನೊಳಗೊಂಡ ವಿಶಾಲ ವ್ಯಾಪ್ತಿಯ ಬದಲಾವಣೆಗಳನ್ನು ಬಹುತೇಕ ಅಭಿವೃದ್ಧಿಶೀಲ ದೇಶಗಳ ಪ್ರಾಧಿಕಾರಗಳು ಅಧಿನಿಯಮಿಸಿವೆ. ಇಂತಹ ನೀತಿಗಳಿಂದ ಕಾಲಕ್ರಮದಲ್ಲಿ ಸಂಭಾವ್ಯ ಲಾಭಗಳು ಗಣನೀಯವಾಗಬಹುದಾದರೂ. ಅದುಮಿಟ್ಟ ಹಣಕಾಸು ಸ್ಥಿರತೆಗಾಗಿ ಅಲ್ಪಕಾಲೀನ ಪರಿಣಾಮಗಳನ್ನು ಪರಿಶೀಲಿಸುವುದು ಕೂಡ ಮುಖ್ಯವಾಗಿದೆ.

## ಸುಧಾರಣೆಗೆ ತಕ್ಕ ವಾತಾವರಣ

ಬಹುತೇಕ ಅಭಿವೃದ್ಧಿಶೀಲ ದೇಶಗಳಲ್ಲಿ ಅದುಮಿಟ್ಟ ವ್ಯವಸ್ಥೆಯ ಕೆಲವು ಅಂಶಗಳು ಸುಧಾರಣಾ ಪ್ರಯತ್ನದುದ್ದಕ್ಕೂ ಯಥಾವತ್ತಾಗಿ ಬಹುಶಃ ಉಳಿದಿರುತ್ತವೆ. ಸಂಪನ್ಮೂಲಗಳ ಹಂಚಿಕೆಯಲ್ಲಿ ಪ್ರಾಧಿಕಾರಿಗಳು ಉಳಿಸಿಕೊಳ್ಳಬಯಸುವ ಅವಶಿಷ್ಟ ಪಾತ್ರವು ಯಾವುದೇ ಸುಧಾರಣಾ ಪ್ರಯತ್ನದ ಸ್ವರೂಪದ ಮೇಲೆ ಪರಿಣಾಮ ಉಂಟುಮಾಡುತ್ತದೆ. ಮತ್ತೊಂದು ಮುಖ್ಯ ಅಂಶವೆಂದರೆ ಅರ್ಥವ್ಯವಸ್ಥೆಗೆ ಆವಶ್ಯಕವಾದ ಹಣಕಾಸು ಮಧ್ಯವರ್ತಿ ಸೇವೆಗಳನ್ನು ಸರಬರಾಜು ಮಾಡಲು ವಿದೇಶಿ ಸಂಸ್ಥೆಗಳು ಮತ್ತು ಮಾರುಕಟ್ಟೆಗಳಿಗೆ ಅವಕಾಶ ಮಾಡಿಕೊಳ್ಳಲು ಪ್ರಾಧಿಕಾರಿಗಳು ಹೊಂದಿರುವ ಒಡಂಬಡಿಕೆಯಾಗಿದೆ. ಇಂಥ ಪ್ರಯತ್ನಗಳ ಪರವಾದ ವಾದಗಳಲ್ಲಿ ತಥ್ಯವಿದ್ದಾಗ್ಯೂ ದೇಶೀಯ ಮಾರುಕಟ್ಟೆಗಳಿಗೆ ವಿದೇಶಿ ಹಣಕಾಸು ಸಂಸ್ಥೆಗಳ ಪ್ರವೇಶವನ್ನು ನಿರ್ಬಂಧಿಸಿವೆ. ಬ್ಯಾಂಕಿಂಗ್ ಉದ್ಯಮವನ್ನು ಬಾಹ್ಯಮಾಲೀಕರು ನಿಯಂತ್ರಿಸಲು ಅವಕಾಶ ಕೊಡುವುದರ ಬಗ್ಗೆ ಇದ್ದ ಆತಂಕಗಳು ಬಹುಶಃ ಇದಕ್ಕೆ ಕಾರಣ. ಇದರ ಜೊತೆಗೆ ಹಣದುಬ್ಬರವು ನಿಯಂತ್ರಣಕ್ಕೆ ಒಳಪಡುವವರೆಗೂ ಹಾಗೂ ದೇಶೀಯ ಹಣಕಾಸು ವ್ಯವಸ್ಥೆಯನ್ನು ಹೆಚ್ಚು ಸ್ಪರ್ಧಾತ್ಮಕವಾಗಿ ಮಾಡುವವರೆಗೂ ದೇಶೀಯ ಮತ್ತು ಬಾಹ್ಯ ಹಣಕಾಸು ಮಾರುಕಟ್ಟೆಗಳ ಪೂರ್ಣ ಸಂಯೋಜನೆಯನ್ನು ವಿಳಂಬಗೊಳಿಸಬೇಕಾಗಬಹುದೆಂದು ಲ್ಯಾಟಿನ್ ಅಮೇರಿಕದ ದಕ್ಷಿಣ ಕೊನೆಯಲ್ಲಿಯ ಹಣಕಾಸು ಸುಧಾರಣೆಯ ಈಚಿನ ವಿಶ್ಲೇಷಣೆಗಳಿಂದ ವ್ಯಕ್ತವಾಗುತ್ತದೆ.

ಈ ಮೊದಲು ಉಲ್ಲೇಖಿಸಿದಂತೆ, ಹಣಕಾಸು ಮಧ್ಯಸ್ಥಿಕೆಯ ಮೇಲಿನ ತೆರಿಗೆಗಳು ಅಭಿವೃದ್ಧಿಶೀಲ ದೇಶಗಳಲ್ಲಿ ರಾಜ್ಯಕೋಶೀಯ ವರಮಾನಕ್ಕೆ ಒಂದು ಆಕರವಾಗಿವೆ. ಇದರ ಜೊತೆಗೆ ಈ ಸಮಾಜಗಳ ಸಾಪೇಕ್ಷವಾಗಿ ಶ್ರೀಮಂತರಾದ ಸದಸ್ಯರ ಮೇಲೆ ತೆರಿಗೆ ವಿಧಿಸಲು ಕೆಲವು ಸಂದರ್ಭಗಳಲ್ಲಿ ಒಂದು ಪ್ರಬಲ ರಾಜಕೀಯ ಬದ್ಧತೆ ಇದೆ! ಈ ಎರಡೂ ಕಾರಣಗಳಿಂದಾಗಿ, ಅಭಿವೃದ್ಧಿ ಹೊಂದಿದ ದೇಶಗಳಿಗೆ ಹೋಲಿಸಿದರೆ, ಅಭಿವೃದ್ಧಿಶೀಲ ದೇಶಗಳ ಸರ್ಕಾರಗಳಿಗೆ ಹಣಕಾಸು ಮಾರುಕಟ್ಟೆಗಳಲ್ಲಿ ನಿರ್ಬಂಧಗಳನ್ನು ತೆಗೆದುಹಾಕುವುದು ಅನೇಕ ವೇಳೆ ಹೆಚ್ಚು ಕಷ್ಟದ ಸಮಸ್ಯೆಯಾಗಿದೆ. ಅಭಿವೃದ್ಧಿಶೀಲ ದೇಶಗಳಲ್ಲಿ ಹಣಕಾಸು ಸುಧಾರಣೆಯ ಮೇಲೆ ಪ್ರಭಾವ ಬೀರುವ ಇನ್ನೊಂದು ಅಂಶವೆಂದರೆ ಕೈಗಾರಿಕಾ ದೇಶಗಳಲ್ಲಿನ ಹಣಕಾಸು ಮಾರುಕಟ್ಟೆಗಳನ್ನು ಸುತ್ತುವರಿದ ಸಾಂಸ್ಥಿಕ ವ್ಯವಸ್ಥೆಗಳು ಅಭಿವೃದ್ಧಿಶೀಲ ಪ್ರಪಂಚದ ಮಾದರಿಯ ಹಣಕಾಸು ವ್ಯವಸ್ಥೆಯಲ್ಲಿ ಸ್ಪಷ್ಟವಾಗಿಲ್ಲ. ಉದಾ : ಬ್ಯಾಂಕುಗಳ ಮೂಲಕ ದೇಶೀಯ ಉದರಿಗಳನ್ನು ಹಾಯಿಸುವ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ಬಂಡವಾಳದ ಸಣ್ಣ ವ್ಯಾಪಾರದ ಮಾರುಕಟ್ಟೆಯೊಂದು ಮಾತ್ರ ಇರುತ್ತದೆ. ಅಲ್ಲದೆ ಖಾಸಗಿ ಉದರಿ ಮಾಪನ ಸೇವೆಗಳು ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿರುವ ಪ್ರತಿಭೂತಿಗಳು ಮತ್ತು ವಿನಿಮಯ ಆಯೋಗದಂತಹ ಸಾರ್ವಜನಿಕ ವಿನಿಯಮನ ಸಂಸ್ಥೆಗಳು ಅಥವಾ ಏಕರೂಪಿ ಲೆಕ್ಕ ಬರಹ ಮಾನಗಳು ಮತ್ತು ಪದ್ಧತಿಗಳು—ಇವಕ್ಕೆ ಅದುಮಿಟ್ಟ ವ್ಯವಸ್ಥೆಯಲ್ಲಿ ಬೇಡಿಕೆ ಇರುವುದಿಲ್ಲ. ಇಂತಹ ಸಾಂಸ್ಥಿಕ ವ್ಯವಸ್ಥೆಗಳು ಕೈಗಾರಿಕೆಗಳಲ್ಲಿಯ ಉದರಿ ಮಾರುಕಟ್ಟೆಗಳ ಒಂದು ಅವಿಭಾಜ್ಯ ಅಂಗವಾಗಿವೆ. ಆದರೆ ಇವು ಅಭಿವೃದ್ಧಿಶೀಲದೇಶಗಳಲ್ಲಿ

ಆರಂಭ ಕಾಲದಲ್ಲಾದರೂ ಸುಸ್ಥಾಪಿತವಾಗಿಲ್ಲ. ಅಭಿವೃದ್ಧಿಶೀಲ ದೇಶಗಳಲ್ಲಿಯ ಹಣಕಾಸು ಸಂಸ್ಥೆಗಳ ವ್ಯವಸ್ಥಾಪಕರ ವಿನಿಯೋಜನ ಆಯ್ಕೆಗಳಿಗೆ ಈ ನಿರ್ಬಂಧಗಳು ತೀವ್ರವಾದ ಮಿತಿಯೊಡ್ಡುವುದರಿಂದ ಬ್ಯಾಂಕುಗಳು ಸಾಲ ನೀಡುವ ಕೈಗಾರಿಕಾ ಸಂಸ್ಥೆಗಳಿಂದ ಹಣಕಾಸು ಸಂಸ್ಥೆಗಳ ಒಡೆತನವನ್ನು ಬೇರ್ಪಡಿಸುವುದಕ್ಕೆ ಯಾವುದೇ ಸ್ಪಷ್ಟ ಕಾರಣವಿರುವುದಿಲ್ಲ. ಇಂಥವೇ ಕಾರಣಗಳಿಂದಾಗಿ ಬ್ಯಾಂಕಿಂಗ್ ವ್ಯವಸ್ಥೆಗೆ ಸ್ಪರ್ಧಾತ್ಮಕ ಸಂರಚನೆ ಒಂದು ಮುಖ್ಯ ನೀತಿಸಂಬಂಧಿ ಉದ್ದೇಶ ಆಗಿರುವುದಿಲ್ಲ. ಅಂತಿಮವಾಗಿ ವಿನಿಯಮನ ಮತ್ತು ವಿಮೆ ಇಳಿಸಿದ ಮಧ್ಯವರ್ತಿಗಳ ಪರೀಕ್ಷಣೆಯಲ್ಲಿ ಬ್ಯಾಂಕಿನ ಪಾತ್ರ ಕೈಗಾರಿಕಾ ದೇಶಗಳಲ್ಲಿರುವುದಕ್ಕಿಂತ ತುಂಬಾ ಭಿನ್ನವಾಗಿದೆ. ಸುಧಾರಣಾಪೂರ್ವದ ಪ್ರನಾಳಿ ವ್ಯವಸ್ಥೆಯೊಂದರಲ್ಲಿ ಬ್ಯಾಂಕುಗಳು ಪರೀಕ್ಷೆಯಲ್ಲಿ ನಿರತವಾಗಿರುವುದಿಲ್ಲ ಮತ್ತು ಅದು ವಿಸ್ತರಣೆಯಲ್ಲಿ ಸರಕಾರಿ ಮಾರ್ಗದರ್ಶಿ ಸೂತ್ರಗಳಿಗೆ ಬದ್ಧವಾಗಿರುತ್ತವೆ ಎಂಬುದನ್ನು ಖಚಿತಪಡಿಸಿಕೊಳ್ಳಲು ಮಾತ್ರ ವಿನಿಯಮಕಾರರು ಪರಿಶೀಲಿಸುತ್ತಾರೆ. ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿಶೀಲ ದೇಶಗಳ ನಡುವೆ ಸಂರಕ್ಷಣಾತ್ಮಕ ವ್ಯತ್ಯಾಸಗಳಿದ್ದಾಗ್ಯೂ ಅಭಿವೃದ್ಧಿಶೀಲ ದೇಶವೊಂದರ ಬ್ಯಾಂಕಿಂಗ್ ವ್ಯವಸ್ಥೆಯ ಪರಿಶೀಲನೆಯಿಂದ ಹಲವು ಸಂಭಾವ್ಯ ತೊಡಕಿನ ತಾಣಗಳು ಬಯಲಿಗೆ ಬರುತ್ತವೆ. ಬ್ಯಾಂಕಿನ ಆಸ್ತಿಗಳು ಒಂದೇ ಸಂಸ್ಥೆಯಲ್ಲಿ ಸಾಂದ್ರೀಕೃತವಾಗದಂತೆ ಅಥವಾ ಅಪಾಯ ಸಂಭವದ ಸಾಮಾನ್ಯ ಮೂಲ ಒಂದಕ್ಕೆ ಸಿಕ್ಕಾಗದಂತೆ ನೋಡಿಕೊಳ್ಳುವುದೇ ಕೈಗಾರಿಕಾ ದೇಶಗಳಲ್ಲಿಯ ಬ್ಯಾಂಕ್ ಪೋರ್ಟ್‌ಫೋಲಿಯೊಗಳ ಮೇಲ್ವಿಚಾರಣೆಯ ಪಾರಂಪರಿಕ ಗುರಿಗಳಲ್ಲೊಂದಾಗಿದೆ. ಬ್ಯಾಂಕುಗಳ ಮತ್ತು ಇತರ ವ್ಯವಹಾರಗಳ ಜಂಟಿ ಮಾಲೀಕತ್ವದ ಇರುವಿಕೆಯಿಂದಾಗಿ ಅಭಿವೃದ್ಧಿಶೀಲ ದೇಶಗಳಲ್ಲಿ ಈ ಉದ್ದೇಶವನ್ನು ಸಾಧಿಸುವುದು ಕಷ್ಟವಾಗಿದೆ. ಜೊತೆಗೆ ಇಂತಹ ದೇಶಗಳೊಳಗಿನ ಬ್ಯಾಂಕಿನ ಎಲ್ಲ ಸಂಭಾವ್ಯ ಗ್ರಾಹಕರೂ ಪದಾರ್ಥಗಳ ಬೆಲೆಗಳಿಗೆ ಅಥವಾ ಬೆಳೆ ಪರಿಸ್ಥಿತಿಗಳಿಗೆ ಒದಗುವ ಧಕ್ಕೆಗಳಿಗೆ ಸಮಾನವಾಗಿ ಪಕ್ಕಾಗಬಹುದು. ಅಲ್ಲದೆ ಅನೇಕ ಆರ್ಥಿಕ ಮತ್ತು ರಾಜಕೀಯ ಕಾರಣಗಳಿಂದಾಗಿ ಅಂತಹ ದೇಶಗಳ ರಾಷ್ಟ್ರೀಯ ವರಮಾನ ಕೈಗಾರಿಕಾ ದೇಶಗಳಲ್ಲಿ ಇರುವುದಕ್ಕಿಂತ ಹೆಚ್ಚಿನ ವ್ಯತ್ಯಾಸಗಳನ್ನು ಪ್ರದರ್ಶಿಸಬಹುದು. ಹೀಗೆ ಬ್ಯಾಂಕುಗಳ ದೇಶೀಯ ಉದರಿಗಳು ಸೀಮಿತಗೊಂಡಿದ್ದರೆ ಅವು ತಮ್ಮ ಆಸ್ತಿ ಪೋರ್ಟ್‌ಫೋಲಿಯೊಗಳನ್ನು ವಿವಿಧೀಕರಿಸುವುದು ಸಾಧ್ಯವಾಗದಿರಬಹುದು. ವಿಪರ್ಯಾಸವೆಂದರೆ, ವಿದೇಶೀಯ ಆಸ್ತಿ ಸಂಪಾದನೆಯನ್ನು ಬಂಡವಾಳದ ಪಲಾಯನವೆಂದು ಪರಿಗಣಿಸಬಹುದು. ಮತ್ತು ಅಭಿವೃದ್ಧಿಶೀಲದೇಶಗಳಲ್ಲಿಯ ಬ್ಯಾಂಕುಗಳ ಹಣಕಾಸು ರಚನೆಯು ಆಸ್ತಿ, ಬಲವರ್ಧನೆಗಿಂತ ಹೆಚ್ಚಾಗಿ ದುರ್ಬಲಗೊಳಿಸುವಿಕೆ ಎಂದು ಅರ್ಥೈಸಬಹುದು.

## ಮಾಲೀಕತ್ವದ ಸಾಂದ್ರೀಕರಣ

ಹೊಸದಾಗಿ ಸಡಿಲಗೊಳಿಸಿದ ವ್ಯವಸ್ಥೆಯಲ್ಲಿ ಪೋರ್ಟ್‌ಫೋಲಿಯೊ ಆಯ್ಕೆಯ ಮೇಲೆ ಪ್ರಭಾವ ಬೀರುವ ಇನ್ನೊಂದು ಅಂಶವೆಂದರೆ, ಆರಂಭದಲ್ಲಿ ಹಣಕಾಸು, ಕೈಗಾರಿಕೆ, ಮತ್ತು ವಾಣಿಜ್ಯ ಉದ್ಯಮಗಳ ಬಹುಮಟ್ಟಿನ ಜಂಟಿ ಮಾಲೀಕತ್ವವಿದೆ. ಅಂತಹ ಸೂತ್ರಧಾರಿ ಕಂಪನಿಗಳು ಅಥವಾ ಗುಂಪುಗಳು ಮಾರುಕಟ್ಟೆ ನಿರ್ಧಾರಿತ ಉದರಿಪತ್ರಕ್ಕೆ ಶೀಘ್ರವಾಗಿ ಹೊಂದಿಕೊಳ್ಳುವಲ್ಲಿ ಅಸಕ್ತರಾಗಿರಬಹುದು. ಅವುಗಳು ಹಿಂದಿನ ಆಡಳಿತದ ಅಡಿಯಲ್ಲಿ ದೀರ್ಘಕಾಲ ಅನುಕೂಲಕರ ಪೋಷಣೆ ಪಡೆದಿದ್ದರೆ ಹಾಗಾಗಬಹುದು. ಅಂಥ ಸಂದರ್ಭಗಳಲ್ಲಿ ಬ್ಯಾಂಕುಗಳು ತಮ್ಮದೇ ಬಂಡವಾಳವನ್ನು ಸ್ವಲ್ಪಕಾಲ ರಕ್ಷಿಸಿಕೊಳ್ಳಲು ಜಾಮೀನು ಇಲ್ಲದ ಸಂಬಂಧಿತ ಉದ್ದಿಮೆಗಳಿಗೆ ಉದರಿಯನ್ನು ವಿಸ್ತರಿಸುತ್ತವೆ.

## ಕೇವಲ ವಿಮೆ ಮತ್ತು ನೈತಿಕ ಅಪಾಯ

ಕೈಗಾರಿಕಾ ದೇಶಗಳಲ್ಲಿ ಪರಿಚಿತವಾಗಿರುವ ಅಭಿವೃದ್ಧಿಶೀಲ ದೇಶಗಳಲ್ಲಿ ಅಡೆತಡೆ ಸಡಿಲಗೊಳಿಸಿದ ವ್ಯವಸ್ಥೆಯಲ್ಲಿ ಇನ್ನೂ ಗಂಭೀರವಾಗಿರುವ ಸಮಸ್ಯೆ ಎಂದರೆ, ಬ್ಯಾಂಕು ಠೇವಣಿಗಳ ವಿಮೆಯಿಂದ ಉದ್ಭವವಾಗುವ ನೈತಿಕ ಅಪಾಯ. ಬ್ಯಾಂಕುಗಳು ಮತ್ತು ಅವುಗಳ ವಾಣಿಜ್ಯ ಋಣಿಗಳ ಶೋಧನ ಸಾಮರ್ಥ್ಯವನ್ನು ಕಾಪಾಡುವ ತಪ್ಪು ಬದ್ಧತೆಗೆ ಸರ್ಕಾರ ಉದರಿ ಹಂಚಿಕೆಯನ್ನು ಸೀಮಿತಗೊಳಿಸುವುದರಲ್ಲಿ ಐತಿಹಾಸಿಕವಾಗಿ. ಅಳವಾಗಿ ತೊಡಗಿರುವುದು ಅದಕ್ಕೆ ವಿಶ್ವಾಸಾರ್ಹವಾಗಿರದಿರಬಹುದು. ಅನೇಕ ಲ್ಯಾಟಿನ್ ಅಮೆರಿಕ ದೇಶಗಳ ಇತ್ತೀಚಿನ ಅನುಭವಗಳಲ್ಲಿ ನಿದರ್ಶಿತವಾಗಿರುವಂತೆ, ದಿವಾಳಿಯಾಗುವ ಹಣಕಾಸು ಮಧ್ಯವರ್ತಿಗಳು ಮತ್ತು ಅವರ ಗ್ರಾಹಕರನ್ನು ರಕ್ಷಿಸಬೇಕೆಂದು ಬರುವ ರಾಜಕೀಯ ಒತ್ತಡವನ್ನು ತಡೆಯುವುದು ಸಾಧ್ಯವಾಗಿರಬಹುದು.

## ಮೇಲ್ವಿಚಾರಣೆ ಮತ್ತು ವಿನಿಯಮನ

ಈ ಸಮಸ್ಯೆಗಳ ಫಲವಾಗಿ ಹಣ ಸುಧಾರಣೆಯೊಂದನ್ನು ಕೈಗೊಂಡಾಗ ಹಣಕಾಸು ಮಧ್ಯವರ್ತಿಗಳ ಮೇಲ್ವಿಚಾರಣೆ ಮತ್ತು ವಿನಿಯಮನದ ಪಾತ್ರ ಇನ್ನೂ ಹೆಚ್ಚು ಮುಖ್ಯವಾಗುತ್ತದೆ. ಇದು ವಿರೋಧಾಭಾಸ. ಹೊಸದಾಗಿ ಸಡಿಲಿಸಲಾದ ವ್ಯವಸ್ಥೆಯಲ್ಲಿ ಅಂತಹ ಮೇಲ್ವಿಚಾರಣೆಯ ಚೌಕಟ್ಟು ಅಸ್ತಿತ್ವದಲ್ಲಿದೆ ಅಥವಾ ಶೀಘ್ರವಾಗಿ ವಿಕಾಸಗೊಳ್ಳುತ್ತದೆ ಎಂದು ಪರಿಭಾವಿಸಬಾರದು. ಕನಿಷ್ಠ ಪಕ್ಷ, ಅಭಿವೃದ್ಧಿಶೀಲ ದೇಶಗಳಲ್ಲಿ ಇಂತಹ ಸಂಸ್ಥೆಗಳನ್ನು ಹೀಗೆ ಸಂರಚಿಸಬೇಕು ಎಂದು ಕೋರಿಸಲು ಹೆಚ್ಚು ಸಮಯ ಹಿಡಿಯುತ್ತದೆ ಮತ್ತು ಇನ್ನೊಂದು ದಾರುಣ ಅನುಭವವಾಗಬಹುದು. ಸುಧಾರಣೆ ಮುಂದುವರಿದಂತೆ, ಹಣದುಬ್ಬರ ಇಳಿದಂತೆ ಬಂಡವಾಳ ಖಾತೆಯ ವಹಿವಾಟುಗಳ ಮೇಲಣ ನಿರ್ಬಂಧಗಳನ್ನು ಸಡಿಲಿಸಿದಂತೆ ಮತ್ತು ಸಾಂಸ್ಥಿಕವಲ್ಲಿ ಸಂರಚನೆಯನ್ನು ಬದಲಿಸಿದಂತೆ, ಮೇಲ್ವಿಚಾರಣೆ ಮತ್ತು ವಿನಿಯಮನದ ವ್ಯವಸ್ಥೆಯ ಸಂಸ್ಥಾಪನೆಯನ್ನು ಕಾಲಕ್ರಮೇಣ ಹೊಂದಿಸಬೇಕಾಗುವುದು ಎಂಬುದು ಸ್ಪಷ್ಟ.

## ವಿವಿಧೀಕರಣ ಮತ್ತು ಆಸ್ತಿಯ ಆಯ್ಕೆ

ಬ್ಯಾಂಕುಗಳ ಮತ್ತು ಬ್ಯಾಂಕೇತರ ಸಂಸ್ಥೆಗಳ ಪೋರ್ಟ್‌ಫೋಲಿಯೊ ಆಯ್ಕೆಯ ಮಿತಿಗಳನ್ನು ಹಣಕಾಸು ಸುಧಾರಣೆ ವಿಸ್ತರಿಸುವುದಾದರೂ ಹಣಕಾಸು ಸ್ಥಿರತೆಯನ್ನು ಸಾಧಿಸಲು ಅಗತ್ಯವಾದ ಪೋರ್ಟ್‌ಫೋಲಿಯೊ ಆಯ್ಕೆಯ ಮೇಲೆ ಮಿತಿಗಳನ್ನು ಗುರುತಿಸುವುದು ಒಂದು ಮೂಲಭೂತ ಹೊಣೆಯಾಗಿದೆ. ಬ್ಯಾಂಕುಗಳು ಮತ್ತು ಕೈಗಾರಿಕಾ ಸಂಸ್ಥೆಗಳ ನಡುವೆ ಪಾರಂಪರಿಕ ಕೊಂಡಿಗಳಿದ್ದಾಗ್ಯೂ, ದೇಶೀಯ ನಷ್ಟ ಸಂಭಾವ್ಯತೆಗಳ ವಿವಿಧೀಕರಣದಿಂದ ಬಿಡಿಬಿಡಿ ಸಂಸ್ಥೆಗಳಿಗೆ (ಪ್ರತ್ಯೇಕವಾಗಿ ಅಥವಾ ಒಂದು ಗುಂಪಿನ ಭಾಗವಾಗಿ) ಹೋಗಬಹುದಾದ ಒಟ್ಟು ಸಾಲದ ಪ್ರಮಾಣದ ಮೇಲೆ ಮಿತಿಗಳನ್ನು ವಿಧಿಸುವುದು ಮತ್ತು ಬ್ಯಾಂಕುಗಳ) ಸಾಲ ನೀಡಬಹುದಾದ ವ್ಯವಹಾರಗಳ ಬಗೆಗಳ ಮೇಲೆ ನಿರ್ಬಂಧಗಳನ್ನು ಹೇರುವುದು ಅವಶ್ಯಕವಾಗುತ್ತದೆ. ಬ್ಯಾಂಕುಗಳ ಸಾಮ್ಯ ಷೇರುಗಳನ್ನು ಹೊಂದಿರುವ ವಾಣಿಜ್ಯ ಸಂಸ್ಥೆಗಳಿಗೆ ಅವು ನೀಡುವ ಸಾಲವನ್ನು ನಿಯಂತ್ರಿಸುವುದು ಮತ್ತು ಉಸ್ತುವಾರಿ ಮಾಡುವುದು ಕೂಡ ಮುಖ್ಯವಾಗಿರುತ್ತದೆ.

## ಹೊಣೆ ಆಯ್ಕೆ

ಪೋರ್ಟ್‌ಫೋಲಿಯೊ ನಷ್ಟಸಂಭಾವ್ಯತೆಗಳನ್ನು ವಿವಿಧೀಕರಿಸುವಲ್ಲಿ ಬ್ಯಾಂಕುಗಳ ಸಾಮರ್ಥ್ಯವು ಬಂಡವಾಳ ನಿಯಂತ್ರಣಗಳಿಂದ ಸೀಮಿತವಾಗಿರುವುದರಿಂದ ಅವುಗಳ ಚಾಲ್ತಿಆಸ್ತಿಗಳ ಸ್ಥಿರ ಮೌಲ್ಯಕ್ಕಿಂತ ಹೆಚ್ಚಿನ ಹೊಣೆಯನ್ನು ಸಾರ್ವಜನಿಕರಿಗೆ ನೀಡಲು ಅವು ಅಸಮರ್ಥವಾಗಬಹುದು. ಸ್ಥಿರ ಸಮಮೌಲ್ಯ ಹೊಣೆಗಳನ್ನು ನೀಡುವ ಹಣಕಾಸುಸಂಸ್ಥೆಗಳು ಇದಕ್ಕೆ ಸಮನಾದ ಮೊತ್ತದ ಸರ್ಕಾರಿ ಅಲ್ಪಾವಧಿ ಪ್ರತಿಭೂತಿಗಳನ್ನು ಹೊಂದಿರಬೇಕೆಂದು ವಿಧಿಸಬೇಕಾಗುತ್ತದೆ. ಪರ್ಯಾಯವಾಗಿ ಬ್ಯಾಂಕಿನ ಏಳಿಗೆಯಲ್ಲಿ ಷೇರು ರೂಪದ ಭಾಗೀದಾರಿಕೆಯ ಒಂದು ಅಂಶವನ್ನು ಹೊಂದಿರುವ ಆಸ್ತಿಗಳ ಒಂದು ಹೆಚ್ಚಿನ ಪಾಲನ್ನು

ಹಣಕಾಸು ಸಂಸ್ಥೆಗಳು ನೀಡಬೇಕೆಂದು ವಿಧಿಸುವುದು ಅಗತ್ಯವಾಗಬಹುದು. ಬ್ಯಾಂಕುಗಳ ಆಸ್ತಿಗಳ ಮಾರುಕಟ್ಟೆ ಮೌಲ್ಯದಿಂದ ಪ್ರತ್ಯೇಕವಾಗಿರುವ ನಾಮಮೌಲ್ಯ ಹೊಂದಿರುವ ಸಮಮೌಲ್ಯ ಠೇವಣಿಗಳ ಪಾಲು ಆದ್ದರಿಂದ, ಕೈಗಾರಿಕಾ ದೇಶಗಳಲ್ಲಿಯ ಬ್ಯಾಂಕುಗಳ ಪ್ರರೂಪೀ ಭಾಗಕ್ಕಿಂತ ಬಹಳಷ್ಟು ಕಡಿಮೆಯಾಗಿರಬೇಕಾಗಬಹುದು. ಆದ್ದರಿಂದ ಅಂತಹ ಸಮಮೌಲ್ಯವಲ್ಲದ ಠೇವಣಿಗಳ ಉಪಯೋಗಕ್ಕಾಗಿಯಾದರೂ ಅವಕಾಶವಾಗುವಂತೆ ಬ್ಯಾಂಕು ವಿನಿಮಯನಗಳನ್ನು ಸಂರಚಿಸಬೇಕು.

### ವಿದೇಶಿ ಚಲಾರ್ಥದ ಅಪಾಯದ ಆಸ್ಪದ

ದೇಶೀಯ ಹಣಕಾಸು ಮಧ್ಯವರ್ತಿಗಳನ್ನು ವಿದೇಶೀ ಚಲಾರ್ಥದ ಅಪಾಯಕ್ಕೆ ತೆರೆದಿಟ್ಟಾಗ ಎಚ್ಚರಿಕೆಯಿಂದ ಉಸ್ತುವಾರಿ ಮಾಡಬೇಕು ಮತ್ತು ಬಹುಶಃ ವಿನಿಯಮನಗೊಳಿಸಬೇಕು ಎಂಬುದು ಇಂಥವೇ ಪರಿಗಣನೆಗಳಿಂದ ಸೂಚಿತವಾಗುತ್ತದೆ. ವಿದೇಶಿ ಮಾರುಕಟ್ಟೆಗಳಿಗೆ ಪ್ರವೇಶಿಸುವುದರ ಮೇಲಣ ನಿರ್ಬಂಧಗಳನ್ನು ಸಡಿಲಗೊಳಿಸದಂತೆ ಈ ಉಸ್ತುವಾರಿ ಸಾಪೇಕ್ಷವಾಗಿ ಹೆಚ್ಚು ಮುಖ್ಯವಾಗುತ್ತದೆ. ಹೀಗೆ ವಿದೇಶಿ ಚಲಾರ್ಥದ ಅಪಾಯ ಸಂಭಾವ್ಯತೆಯನ್ನು ಸಂಪೂರ್ಣವಾಗಿ ರಕ್ಷಿಸಬೇಕೆಂದು ವಿಧಿಸುವುದರಿಂದ ಪ್ರಯೋಜನವಾಗಬಹುದು.

### ಯಶಸ್ಸಿನ ಪೂರ್ವ ಷರತ್ತುಗಳು

ಉಸ್ತುವಾರಿ ನೀತಿ, ಸ್ಥಿರತೆಯ ಪಾತ್ರವಹಿಸಬಹುದಾದ ಯಶಸ್ವೀ ಸುಧಾರಣೆಗೆ ಹಲವು ಪೂರ್ವ ಷರತ್ತುಗಳ ಅವಶ್ಯವಿದೆ. ಪ್ರಥಮವಾಗಿ ತೆರಿಗೆ ಆದಾಯ ನಷ್ಟದಿಂದ ಉಂಟಾಗುವ ಸಮಸ್ಯೆಯೂ ಸೇರಿದಂತೆ ರಾಜ್ಯಕೋಶೀಯ ಸಮಸ್ಯೆಗಳನ್ನು ಬಗೆಹರಿಸಬೇಕಾಗುತ್ತದೆ. ಸಡಿಲಿಕೆ ತಂತಾನೆ ಸರ್ಕಾರದ ರಾಜ್ಯ ಕೋಶೀಯ ಪರಿಸ್ಥಿತಿಯನ್ನು ಉತ್ತಮಗೊಳಿಸುವುದಿಲ್ಲ. ಸಾಮಾನ್ಯವಾಗಿ ಹಣಕಾಸು ಮಧ್ಯವರ್ತನೆಗೆ ಸುಂಕವಿಧಿಸುವ ಸಾಮರ್ಥ್ಯದ ಇಳಿತಾಯದಿಂದ ಆಂಶಿಕ ಕಾರಣದಿಂದಾಗಿ ಹೆಚ್ಚುತ್ತಿರುವ ಹಣದುಬ್ಬರ ದರಗಳೊಂದಿಗೆ ಬಂದಲ್ಲಿ ಯಾವುದೇ ಸಡಿಲಿಕೆ ಯೋಜನೆಯು ಕೆಲಸ ಮಾಡದಿರಬಹುದು.

ಎರಡನೆಯದಾಗಿ ದೇಶೀಯ ಹಣಕಾಸು ವಿನಿಯೋಜನೆಗಳ ಪಲಾಯನದಿಂದ ಸ್ಥೂಲ ಬಾಹ್ಯ ಋಣದಲ್ಲಿ ಆಗಿರುವ ಏರಿಕೆಗೆ ಅನುಗುಣವಾಗಿ ಇತರ ಸಂರಚನಾತ್ಮಕ ಸುಧಾರಣೆಗಳೊಂದಿಗೆ ಹಣಕಾಸು ಸುಧಾರಣೆಗಳನ್ನು ಸಮನ್ವಯಗೊಳಿಸುವುದು (ಉದಾ : ಸುಂಕದ ಇಳಿತಗಳು). ಅಲ್ಲದೆ ದೇಶೀಯ ಮತ್ತು ಅಂತರರಾಷ್ಟ್ರೀಯ ಹಣಕಾಸು ಮಾರುಕಟ್ಟೆಗಳ ಸಮಗ್ರೀಕರಣದ ವೇಗವನ್ನು ಸೀಮಿತಗೊಳಿಸುವುದು (ವ್ಯಾಪಾರ ಸುಧಾರಣೆಯ ಮುಂದುವರಿಕೆ ಹೆಚ್ಚು ಕಷ್ಟಕರವಾಗುವಂತೆ ಮಾಡುವ ನೈಜ ವಿನಿಮಯ ದರದ ಏರಿಳಿತಗಳಿಗೆ ಅವಕಾಶ ಉಂಟುಮಾಡುವ ಬಂಡವಾಳ ಹರಿವುಗಳನ್ನು ತಪ್ಪಿಸುವುದಕ್ಕಾಗಿ) ಅಗತ್ಯವಾಗುತ್ತದೆ. ಅಲ್ಲದೆ ದೇಶೀಯ ಋಣಗಳಿಗೆ ತಮ್ಮ ವಿನಿಮಯ ದರ ಮತ್ತು ಬಡ್ಡಿ ದರ ನಷ್ಟಸಂಭಾವ್ಯತೆಗಳ ವಿರುದ್ಧ ರಕ್ಷಣೆ ಏರ್ಪಡಿಸಿಕೊಳ್ಳಲು ಅವಕಾಶ ನೀಡಬೇಕು. ಅಥವಾ ಅವುಗಳ ವಿರುದ್ಧ ಎಂದಾದರೂ ರಕ್ಷಣೆಯನ್ನು ಒದಗಿಸಬೇಕು. ಅಂತಹ ನಷ್ಟ ವಿರೋಧ ಸಾಧ್ಯತೆಗಳಿಲ್ಲದಿದ್ದರೆ ವಿನಿಮಯ ದರದ ಅಥವಾ ಅಂತರಾಷ್ಟ್ರೀಯ ಬಡ್ಡಿ ದರದ ಗಮನಾರ್ಹ ಬದಲಾವಣೆಗಳ ಫಲವಾಗಿ ಹಣಕಾಸು ಸುಧಾರಣಾ ಪ್ರಕ್ರಿಯೆ ಒಮ್ಮೆಲೇ ಅಸ್ಥಿರತೆಗೆ ಒಳಗಾಗಬಹುದು.

ಮೂರನೆಯದಾಗಿ ಉಸ್ತುವಾರಿ ನೀತಿಯನ್ನು ಸಾಹಸಿ–ಉದ್ಯಮಿಗಳಿಗೆ, ಅದರಲ್ಲೂ ವಿಶೇಷವಾಗಿ ಅದೇ ಸೂತ್ರಧಾರಿ ಕಂಪನಿಯ ಕಕ್ಷೆಯೊಳಗಿರುವ ಉದ್ಯಮಿಗಳಿಗೆ .ನಿಧಿಗಳನ್ನು ಒದಗಿಸುವ ಬ್ಯಾಂಕುಗಳ ಬದ್ಧತೆಯನ್ನು ಮಿತಿಗೊಳಿಸಲಿಕ್ಕಾದರೂ ಬಳಸಬೇಕು. ಮಾರುಕಟ್ಟೆ ಅನುಸ್ಥಾಪಿತ ವ್ಯವಸ್ಥೆಯ ಅಡಿಯಲ್ಲಿರುವ ಬ್ಯಾಂಕೇತರ ಉದ್ಯಮಗಳ ದಿವಾಳಿತನದ ಸಂಭಾವ್ಯತೆಯ ಫಲವಾಗಿ ವಿಶೇಷ ಸಹಾಯಧನ ನೀಡುವುದು ಅಥವಾ ಅಂತಹ ಸಂಸ್ಥೆಗಳ ಷೇರುಗಳನ್ನು ಸರ್ಕಾರ ಕೊಳ್ಳುವುದು ಅಗತ್ಯವಾಗಬಹುದು. ಆದರೆ ಈ ಸಹಾಯದ್ರವ್ಯವನ್ನು ಸಾಮಾನ್ಯ ರಾಜ್ಯಕೋಶೀಯ ಖಾತೆಗಳ ಮೂಲಕ ವ್ಯವಸ್ಥೆಗೊಳಿಸಬೇಕೇ ಹೊರತು ಹಣಕಾಸು ವ್ಯವಸ್ಥೆಯ ಮೂಲಕವಲ್ಲ.

ಮೇಲುಸ್ತುವಾರಿಕೆ ನೀತಿಯಲ್ಲಿ ಆರಂಭಿಕ ಮಾಪಾರ್ಣಗಳನ್ನು ಪೋರ್ಟ್‌ಫೋಲಿಯೊ ನಷ್ಟ ಸಂಭಾವ್ಯತೆಗಳ ವಿವಿಧೀಕರಣವನ್ನು ಉತ್ತಮಪಡಿಸಲು, ಅಸಮಮೌಲ್ಯದ ಠೇವಣಿಗಳಿಗೆ ಅವಕಾಶ ಕೊಡಲು, ಮತ್ತು ಸಮಮೌಲ್ಯ ಠೇವಣಿಗಳಿಗೆ ಗಣನೀಯ ಬೆಂಬಲ ನೀಡಲು, ಹಾಗೂ ಬ್ಯಾಂಕಿನ ಬಂಡವಾಳ ಸ್ಥಿತಿಯನ್ನು ಬಲಪಡಿಸಲು ಲೆಕ್ಕ ಪರಿಶೋಧಕ ಪ್ರಕ್ರಿಯೆಯನ್ನು ಬಲಪಡಿಸುವ ಕ್ರಮಗಳ ಮೇಲೆ ಕೇಂದ್ರೀಕರಿಸಬಹುದು.

ಈ ಮೇಲಿನ ಯಾವುದೇ ಮೇಲುಸ್ತುವಾರಿ ನೀತಿಗಳನ್ನು ಅಭಿವೃದ್ಧಿಶೀಲ ದೇಶವೊಂದರಲ್ಲಿ ಅನುಷ್ಠಾನಗೊಳಿಸುವುದು ಸುಲಭವಲ್ಲ. ಆದಾಗ್ಯೂ ಅಭಿವೃದ್ಧಿಶೀಲ ದೇಶಗಳಲ್ಲಿ ಗಮನಾರ್ಹವಾಗಿರುವ ಪ್ರರೂಪಿ ಸಾಂಸ್ಥಿಕ ವ್ಯವಸ್ಥೆಗಳು ಮುಕ್ತ ಮತ್ತು ತೀವ್ರ ಸ್ಪರ್ಧಾತ್ಮಕವಾದ ಅಂತಾರಾಷ್ಟ್ರೀಯ ಹಣಕಾಸು ಪರಿಸರದಲ್ಲಿ ಬದುಕುವುದು ಸಾಧ್ಯವಾಗದೆ ಹೋಗಬಹುದು. ★

---

## ಮೊಟ್ಟೆಯಿಂದ ಚೆಕ್ಕು

ಒಮ್ಮೆ ಒಬ್ಬ ಮೊಟ್ಟೆಯೊಂದರ ಮೇಲೆ ಚೆಕ್ಕು ಬರೆದುಕೊಟ್ಟನಂತೆ. ಅದು ಪಾವತಿಯಾಯಿತಂತೆ. ಇಂಗ್ಲೆಂಡಿನ ಮಿಡ್ಲೆಂಡ್ ಬ್ಯಾಂಕಿನ ಕೈಪಿಡಿಯೊಂದರಲ್ಲಿ ಇದರ ಉಲ್ಲೇಖವಿದೆ.

ಇಂದು ನಾವೆಲ್ಲ ಬ್ಯಾಂಕ್ ಒದಗಿಸಿದ ಅಚ್ಚಾದ ನಮೂನೆಗಳಲ್ಲೇ ಚೆಕ್ಕು ಬರೆಯುತ್ತೇವೆ, ನಮಗೆ ಬ್ಯಾಂಕು ಒದಗಿಸಿದ್ದು ಬಿನಾ ಬೇರೊಬ್ಬರಿಗೆ ಒದಗಿಸಿದ ನಮೂನೆಯಲ್ಲಿ ಬರೆದರೂ ಅಂಥ ಆದೇಶವನ್ನು ಬ್ಯಾಂಕು ಆದರಿಸುವುದಿಲ್ಲ. ಆದರೆ ಹಿಂದೆ ಹೀಗೆ ಇರಲಿಲ್ಲ. ಯಾವುದೇ ಕಾಗದದ ಮೇಲೆ ಅಥವಾ ಯಾವುದೇ ಪದಾರ್ಥದ ಮೇಲಾದರೂ ಚೆಕ್ ಬರೆಯಬಹುದಿತ್ತು. ಯಾವುದರ ಮೇಲೆ ಚೆಕ್ ಬರೆಯಬೇಕು, ಯಾವುದರಿಂದ ಬರೆಯಬೇಕು ಎಂಬುದು ಇಂದಿಗೂ ಕಾನೂನಿನಲ್ಲಿ ಕಾಣಬರುವುದಿಲ್ಲ.

ನೂರು ವರ್ಷದ ಹಿಂದೆ ಕ್ಯಾಲಿಫೋರ್ನಿಯನ್ ಬ್ಯಾಂಕ್ ಕಂಪನಿಯೊಂದರ ಗ್ರಾಹಕನೊಬ್ಬ 28 ಸಾವಿರ ಡಾಲರನ್ನು ತನ್ನ ಖಾತೆಯಿಂದ ಹಿಂಪಡೆಯ ಬಯಸಿದನಂತೆ. ಹೆಚ್ಚಿನ ಮೊಬಲಗಿನ ಚೆಕ್ಕಿನ ಮೇಲೆ ಬ್ಯಾಂಕ್ ಅಧಿಕಾರಿಯೊಬ್ಬನ ಸಹಿ ಆಗ ಅಗತ್ಯವಿತ್ತಂತೆ. ಬ್ಯಾಂಕಿನ ಪಾಲುದಾರನೊಬ್ಬನಿಂದ ತನ್ನ ಚೆಕ್ಕಿಗೆ ಸಹಿ ಮಾಡಿಸಿಕೊಳ್ಳಲು ಗ್ರಾಹಕ ಅವನನ್ನು ಹುಡುಕಿಕೊಂಡು ಹೋದ. ಆತ ಮರದ ದಿಮ್ಮಿಗಳ ಅಂಗಡಿಯಲ್ಲಿದ್ದ. ಅಲ್ಲಿ ಕಾಗದವಾಗಲಿ ಲೇಖನಿಯಾಗಲಿ ಅವನಿಗೆ ಸಿಗಲಿಲ್ಲ. ಅಲ್ಲಿ ಬಿದ್ದ ಮರದ ಚಪ್ಪಟೆಯಾದ ತುಂಡೊಂದರ ಮೇಲೆ ಸೀಮೆಸುಣ್ಣದಿಂದ ಅವನು 28 ಸಾವಿರ ಡಾಲರುಗಳಿಗೆ ಚೆಕ್ಕು ಬರೆದು ಸಹಿ ಹಾಕಿದ. ಗ್ರಾಹಕ ಅದನ್ನು ತೆಗೆದುಕೊಂಡು ಹೋಗಿ ಹಾಜರುಪಡಿಸಿದ. ಅದರ ಮೇಲೆ ಬ್ಯಾಂಕು ಮೊಬಲಗನ್ನು ಪಾವತಿ ಮಾಡಿತು.

---

# ಬ್ಯಾಂಕಿಂಗ್ ಸುದ್ದಿಸಾರ

'ರಂ'

## ಬ್ಯಾಂಕುಗಳ ಲೆಕ್ಕವರ್ಷದಲ್ಲಿ ಬದಲಾವಣೆ

ಬ್ಯಾಂಕಿಂಗ್, ಸಾರ್ವಜನಿಕ ಹಣಕಾಸು ಸಂಸ್ಥೆಗಳ ಮತ್ತು ಪರಕ್ರಾಮ್ಯ ಸಂಲೇಖಗಳ ಕಾನೂನು (ತಿದ್ದುಪಡಿ) ಅಧಿನಿಯಮ 1988ರ ಜಾರಿಯಿಂದಾಗಿ ಭಾರತ ಸರಕಾರಕ್ಕೆ ಬ್ಯಾಂಕು ಹಾಗೂ ಇತರ ಸಾರ್ವಜನಿಕ ಹಣಕಾಸು ಸಂಸ್ಥೆಗಳ ಲೆಕ್ಕವರ್ಷವನ್ನು ಅಧಿಸೂಚನೆಯೊಂದರ ಮೂಲಕ ನಿರ್ಧರಿಸಲು ಅಧಿಕಾರ ದೊರಕಿದೆ. ಈ ಅಧಿಕಾರವನ್ನು ಉಪಯೋಗಿಸಿ ಡಿಸೆಂಬರ್ 30ರಂದು ಭಾರತ ಸರಕಾರ ಅಧಿಸೂಚನೆ ಹೊರಡಿಸಿ 31-12-1988ಕ್ಕೆ ಕೊನೆಗೊಳ್ಳಬೇಕಾದ ಲೆಕ್ಕವರ್ಷವನ್ನು 31-3-1989ಕ್ಕೆ 15 ತಿಂಗಳ ಅವಧಿಗೆ ವಿಸ್ತರಿಸಿ ಅಧಿಸೂಚನೆ ಹೊರಡಿಸಿದೆ. ಅಲ್ಲಿಂದ ಮುಂದೆ ಮತ್ತೆ 12 ತಿಂಗಳ ಲೆಕ್ಕವರ್ಷವಿದ್ದು ಪ್ರತಿ ವರ್ಷದ ಮಾರ್ಚ್ 31ಕ್ಕೆ ವರ್ಷಾಂತ್ಯ ಲೆಕ್ಕಪತ್ರ ಸಿದ್ಧಪಡಿಸಬೇಕಾಗುತ್ತದೆ. ★

## ಠೇವಣಿ ವಿಮೆ ಹಾಗೂ ಉದರಿ ಖಾತರಿ ನಿಗಮದ ಯೋಜನೆಗಳಲ್ಲಿ ಬದಲಾವಣೆ

1-1-1989ರಿಂದ ಆದ್ಯತಾವಲಯದ ಅಡಿ ಬ್ಯಾಂಕುಗಳು ನೀಡುವ ಎಲ್ಲಾ ಉದರಿಗೆ ನಿಗಮದ ರಕ್ಷೆ ದೊರಕುತ್ತದೆ. ಆದ್ಯತಾವಲಯಕ್ಕೆ ಹೆಚ್ಚಿನ ಉದರಿ ಹರಿಯುವಂತೆ ಈ ಕ್ರಮ ನೆರವು ನೀಡುತ್ತದೆ. ನಿಗಮಕ್ಕೆ ನೀಡಬೇಕಾದ ವಿಮಾಶುಲ್ಕವನ್ನು ಶೇ. 1. 5ಕ್ಕೆ ಹೆಚ್ಚಿಸಿ ನೀಡಿಕೆಯನ್ನು ಸರಳಗೊಳಿಸಲಾಗಿದೆ. ಸಣ್ಣ ಸಾಲ (ಸಣ್ಣ ಪ್ರಮಾಣ ಕೈಗಾರಿಕೆ) ಖಾತರಿ ಯೋಜನೆ 1981ರಡಿ ದೊರಕುತ್ತಿದ್ದ ಖಾತರಿಯಲ್ಲಿ ಬದಲಾವಣೆ ಮಾಡಲಾಗಿದ್ದು, ದುಡಿಯುವ ಬಂಡವಾಳ ಹಾಗೂ ಅವಧಿಸಾಲಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಗರಿಷ್ಠಮಿತಿ ವಿಧಿಸಲಾಗುವದು ★

## ಪ್ರಾದೇಶಿಕ ಗ್ರಾಮೀಣ ಬ್ಯಾಂಕ್ ಬಂಡವಾಳ : ಹೊಸ ಸೂತ್ರ

ಭಾರತ ಸರಕಾರ ಇತ್ತೀಚೆಗೆ ಅಧಿಸೂಚನೆಯೊಂದನ್ನು ಹೊರಡಿಸಿ, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಬಂಡವಾಳದಲ್ಲಿ ಪ್ರವರ್ತಕ ಬ್ಯಾಂಕು ಹಾಗೂ ರಾಜ್ಯ ಸರಕಾರಗಳ ಪಾಲನ್ನು ತಲಾ ಶೇ 20ಕ್ಕೆ ನಿಗದಿಸಿ ಉಳಿದ ಶೇ 60ರಷ್ಟನ್ನು ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ತುಂಬುವಂತೆ ನಿಗದಿಪಡಿಸಿದೆ. ಮುಂಚೆ ಬಂಡವಾಳವನ್ನು ಕೇಂದ್ರ ಸರಕಾರ, ಪ್ರವರ್ತಕ ಬ್ಯಾಂಕ್, ರಾಜ್ಯಸರಕಾರ 50:15:35ರ ಪ್ರಮಾಣದಲ್ಲಿ ನೀಡುತ್ತಿದ್ದವು. ★

## ಕೃಷಿ ಉದರಿ ಕಾರ್ಡ್

ಅಲಹಾಬಾದ್ ಬ್ಯಾಂಕು 1989ರ ಮುಂಗಾರಿನಿಂದ ತಾನು ಅಗ್ರಬ್ಯಾಂಕ್ ಆದ ವ.ಊರು ಜಿಲ್ಲೆಗಳಲ್ಲಿ ಕೃಷಿ ಉದರಿ ಕಾರ್ಡ್ ನೀಡಲಿದೆ. ಇದರಿಂದ ಪಡೆಯುವ ಕೃಷಿಕ ಗ್ರಾಹಕರ ಬೆಳೆ ಸಾಲ ಕಟಾವು ಆದನಂತರ ಫಸಲು ಸಾಲವಾಗಿ ಪರಿವರ್ತಿತವಾಗಿ ಫಸಲಿಗೆ ಉತ್ತಮ ಬೆಲೆ ದೊರಕಿದಾಗ ಮಾರಾಟಮಾಡಲು ಅವಕಾಶ ದೊರಕುತ್ತದೆ. ★

## ಅಂತರ ಬ್ಯಾಂಕ್ ಭಾಗೀದಾರಿ ಪತ್ರ

ಭಾರತೀಯ ರಿಸರ್ವ್ ಬ್ಯಾಂಕು, ಭಾರತದ ಬ್ಯಾಂಕರುಗಳ ಸಂಘ ಸಿದ್ಧಪಡಿಸಿದ ಅಂತರಬ್ಯಾಂಕ್ ಭಾಗಿದಾರಿ ಪತ್ರ ಸಂಹಿತೆಯನ್ನು ಒಪ್ಪಿದೆ. ಹಣ ಮಾರುಕಟ್ಟೆ ಹೊಸ ಸಂಲೇಖವಾದ ಅಂತರಬ್ಯಾಂಕ್ ಭಾಗಿದಾರಿ ಪತ್ರ ಮಾರುಕಟ್ಟೆಯಲ್ಲಿ ಪ್ರಮುಖ ಪಾತ್ರ ವಹಿಸಲಿದೆ. ★

## ಪಟ್ಟಣ ಬ್ಯಾಂಕಿಂಗ್ ಅಭಿವೃದ್ಧಿ ಸಂಸ್ಥೆ

ಪಟ್ಟಣ ಸಹಕಾರಿ ಬ್ಯಾಂಕುಗಳ ಸಿಬ್ಬಂದಿ ಹಾಗೂ ಅಧಿಕಾರಿಗಳಿಗೆ ಮೂಲಭೂತ ಹಾಗೂ ಆಧುನಿಕ ಬ್ಯಾಂಕಿಂಗ್ ತಂತ್ರಜ್ಞಾನಗಳ ಬಗ್ಗೆ ತರಬೇತಿ ನೀಡಲು ದಿ ಬಾಂಬೆ ಮರ್ಕೆಂಟೈಲ್ ಸಹಕಾರಿ ಬ್ಯಾಂಕು "ಶೇಕ್ ಮೊಹಮ್ಮದಾಲಿ ಅಲ್ಲಾಭಕ್ಸ್ ಅರ್ಬನ್ ಬ್ಯಾಂಕಿಂಗ್ ಡೆವಲಪ್‌ಮೆಂಟ್ ಇನ್ಸ್ಟಿಟ್ಯೂಟ್" ಎಂಬ ಸಂಸ್ಥೆಯೊಂದನ್ನು ಸ್ಥಾಪಿಸಿದೆ. ★

## ಸುಂಕ ಮರುಪಾವತಿ/ನಗದು ಪರಿಹಾರ ಬೆಂಬಲ ನೀಡಲು ಬ್ಯಾಂಕುಗಳಿಗೆ ಅಧಿಕಾರ

ರಫ್ತುದಾರರಿಗೆ ರಫ್ತು ಅಭಿವೃದ್ಧಿಗಾಗಿ ಸರಕಾರ ನೀಡುವ ಸೌಲಭ್ಯಗಳನ್ನು ಅಂದರೆ ಸುಂಕ ಮರುಪಾವತಿ/ನಗದು ಪರಿಹಾರ ಬೆಂಬಲ ಪಾವತಿಗಳನ್ನು ಬ್ಯಾಂಕುಗಳೇ. ನೇರವಾಗಿ ವಿತರಿಸುವುದರ ಬಗ್ಗೆ ಪ್ರಸ್ತಾಪವೊಂದನ್ನು ಪರಿಶೀಲಿಸಲು ಭಾರತದ ಬ್ಯಾಂಕುಗಳ ಸಂಘದ ಅಧ್ಯಕ್ಷ ಆರ್ ಶ್ರೀನಿವಾಸನ್ ಅವರ ಅಧ್ಯಕ್ಷತೆಯಲ್ಲಿ ಹಣಕಾಸು ಹಾಗೂ ವಾಣಿಜ್ಯ ಮಂತ್ರಾಲಯದ ಅಧಿಕಾರಿಗಳ ಜಂಟಿ ಸೇವೆಯೊಂದನ್ನು ನೇಮಿಸಲಾಗಿದೆ. ★

## ತಜ್ಞಸೇವಾ ಶಾಖೆಗಳ ಬಗ್ಗೆ ಹೊಸ ಧೋರಣೆ

ಪಟ್ಟಣ ಪ್ರದೇಶಗಳಲ್ಲಿ ಔದ್ಯಮಿಕ ಹಣಕಾಸು, ವಿದೇಶಿ ವಿನಿಮಯ ವ್ಯವಹಾರ, ಸಣ್ಣಕೈಗಾರಿಕೆಗಳಿಗೆ ಮೀಸಲಾದ ತಜ್ಞಸೇವಾ ಶಾಖೆಗಳನ್ನು ಹೆಚ್ಚು ಹೆಚ್ಚು ತೆಗೆಯಲು ಅನುಕೂಲವಾಗುವಂಥ ಹೊಸ ಧೋರಣೆಯೊಂದನ್ನು ಭಾರತೀಯ ರಿಸರ್ವ್ ಬ್ಯಾಂಕು ರೂಪಿಸಿದೆ. ★

## ಇಂದೂರಿನ ಸ್ಟೇಟ್ ಬ್ಯಾಂಕ್ ವಿಕ್ರಮ

1987ನೇ ವರ್ಷದ 28 ಸರ್ಕಾರಿ ಕ್ಷೇತ್ರದ ಬ್ಯಾಂಕುಗಳ ಸಾಧನೆಗಳ ವಿಶ್ಲೇಷಣೆಯಲ್ಲಿ ಇಂದೂರಿನ ಸ್ಟೇಟ್ ಬ್ಯಾಂಕು ಪ್ರಥಮಸ್ಥಾನ ಗಳಿಸಿದೆ. 1987ರಲ್ಲಿ ಈ ಬ್ಯಾಂಕಿನ. ಠೇವಣಿವೃದ್ಧಿ ಶೇ 42ರಷ್ಟಿದ್ದರೆ ಉದರಿಯ ವೃದ್ಧಿ ಶೇ 28ರಷ್ಟಿತ್ತು. ಸರ್ಕಾರಿ ಬ್ಯಾಂಕುಗಳ ಸರಾಸರಿ ಠೇವಣಿವೃದ್ಧಿ ಶೇ 15 ಹಾಗೂ ಉದರಿ ವೃದ್ಧಿ ಶೇ. 14. ಈ ಬ್ಯಾಂಕಿನ ಉದ್ಯೋಗಿಯ ಉತ್ಪಾದಕತೆಯ ವೃದ್ಧಿ ಶೇ. 36.56ರಷ್ಟಿದ್ದು ಸರಾಸರಿ ವೃದ್ಧಿಯ ಮೂರುಪಟ್ಟಿದ್ದಿತು. ಈ ಬ್ಯಾಂಕಿನ ಲಾಭ ಶೇ. 104ರಷ್ಟು ವೃದ್ಧಿಸಿದ್ದು ಎಲ್ಲ ಬ್ಯಾಂಕುಗಳ ಸರಾಸರಿ ವೃದ್ಧಿ ಶೇ. 36. ★

## ದುಡಿಯುವ ಬಂಡವಾಳಕ್ಕೆ ಏಕ ಕಿಟಕಿ ವ್ಯವಸ್ಥೆ

ಕಲ್ಯಾಣ ಸುಂದರಂ ಸಮಿತಿಯ ಶಿಫಾರಸಿನಂತೆ ಕೈಗಾರಿಕಾ ಘಟಕಗಳಿಗೆ ಶೀಘ್ರ ದುಡಿಯುವ ಬಂಡವಾಳ ದೊರೆಯಲು ಭಾರತೀಯ ರಿಸರ್ವ್‌ಬ್ಯಾಂಕು ಎಲ್ಲ ಬ್ಯಾಂಕುಗಳಿಗೆ ನಿರ್ದೇಶನ ನೀಡಿದೆ. ಸಂಗಮ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ದುಡಿಯುವ ಬಂಡವಾಳ ನೀಡುವಿಕೆಯನ್ನು ಶೀಘ್ರವಾಗಿ ನಿರ್ಧರಿಸಲು ನಾಯಕ ಬ್ಯಾಂಕಿಗೆ ದುಡಿಯುವ ಬಂಡವಾಳವನ್ನು ನಿರ್ಧರಿಸುವ, ದಸ್ತಾವೇಜಗಳನ್ನು ಸ್ವೀಕರಿಸುವ, ಹಾಗೂ ದುಡಿಯುವ ಬಂಡವಾಳವನ್ನು ವಿತರಿಸುವ ಹೊಣೆ ನೀಡಲಾಗಿದೆ. ★

## ಕೆನರಾ ಬ್ಯಾಂಕ್‌ನಿಂದ ಪೇರು ದಲಾಲರಿಗೆ ಹೊಸ ಸೇವೆ

ಕಲಕತ್ತಾ ಸ್ಟಾಕ್ ವಿನಿಮಯ ಕೇಂದ್ರ ಹಾಗೂ ಕೆನರಾ ಬ್ಯಾಂಕ್ ನಡುವಣ ಒಪ್ಪಂದದಂತೆ ಪೇರು ದಲಾಲರಿಗೆ ಗ್ರಾಹಕರಿಗೆ ಬಹುವಿಧ ಸೇವೆ ಸಲ್ಲಿಸುವ ಸಹಾಯಕ ಸಂಸ್ಥೆಯೊಂದನ್ನು ಸ್ಥಾಪಿಸಲಾಗುವುದು. ಒಳಮನೆ ಸ್ಟಾಕ್ ಹೋಲ್ಡಿಂಗ್ ನಿಗಮವಾಗಿ ಕಾರ್ಯ ನಿರ್ವಹಿಸುವ ಈ ಸಂಸ್ಥೆಯಲ್ಲಿ ಎರಡು ಸಂಸ್ಥೆಗಳೂ ಬಂಡವಾಳದಲ್ಲೂ ಪಾಲುಗೊಳ್ಳುವುವು.

ಅಸ್ವಸ್ಥ ಘಟಕಗಳಿಗೆ ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ ಯೋಜನೆ ಅಸ್ವಸ್ಥ ಘಟಕಗಳ ಬಗ್ಗೆ ಮಾಹಿತಿ ಒದಗಿಸಿ ಅವುಗಳನ್ನು ಇತರ ಘಟಕಗಳೊಡನೆ ವಿಲೀನಗೊಳಿಸಲು ಅಥವಾ ಇತರ ಉದ್ಯಮಗಳವರು ಅವುಗಳನ್ನು ಕೊಂಡುಕೊಳ್ಳಲು ವಿಭಾಗವೊಂದನ್ನು ತೆರೆಯಲಿದೆ. ಅಂತಹ ಅಸ್ವಸ್ಥ ಘಟಕಗಳಿಗೆ ಹಲವು ರಿಯಾಯ್ತಿ ನೀಡಲು ಬ್ಯಾಂಕು ಸಿದ್ಧವಿದೆ. ★

## ರಾಷ್ಟ್ರೀಯ ತೀರುವೆ ಕೇಂದ್ರ

ಅಂತರ ನಗರ ತೀರುವೆ ವ್ಯವಸ್ಥೆಯನ್ನು ಜನವರಿ 3, 1989ರಂದು ಕೇಂದ್ರ ಹಣಕಾಸು ಸಚಿವ ಎಸ್. ಬಿ ಚವ್ಹಾಣ್ ಉದ್ಘಾಟಿಸಿದರು. ಜೂನ್ 1989 ರಿಂದ ಕಾರ್ಯ ನಿರ್ವಹಿಸುತ್ತಿರುವ ಈ ವ್ಯವಸ್ಥೆಯಿಂದಾಗಿ ಬೊಂಬಾಯಿ, ದೆಹಲಿ, ಮದರಾಸು, ಕಲ್ಕತ್ತ ನಗರಗಳಲ್ಲಿನ ಬ್ಯಾಂಕ್ ಶಾಖೆಗಳ ಮೇಲೆ ರಚಿತವಾದ ಚೆಕ್ಕುಗಳ ತೀರುವಳಿ ವಾರವೊಂದರಲ್ಲಿ ನಡೆಯುತ್ತದೆ. ಇನ್ನು ಮುಂದೆ ಈ ವ್ಯವಸ್ಥೆ ಅಹಮದಾಬಾದ್, ಹೈದರಾಬಾದ್ ಹಾಗೂ ಬೆಂಗಳೂರು ನಗರಗಳಲ್ಲಿ ದೊರಕಲಿದೆ. ★

## ಫೆಡರಲ್ ಬ್ಯಾಂಕ್ ಲಿ.

ವಣಿಕ ಬ್ಯಾಂಕಿಂಗ್ ಕ್ಷೇತ್ರವನ್ನು ಪ್ರಥಮವಾಗಿ ಪ್ರವೇಶಿಸಿದ ಖಾಸಗಿ ಬ್ಯಾಂಕ್ ಎನ್ನುವ ಹೆಗ್ಗಳಿಕೆ ಫೆಡರಲ್ ಬ್ಯಾಂಕಿನದು. ದೀಪಕ್ ಫರ್ಟಿಲೈಸರ್ಸ್ ಹಾಗೂ ಕೆಮಿಕಲ್ಸ್‌ನ ಇತ್ತೀಚಿನ ಸಾಲಪತ್ರ ನೀಡಿಕೆಯ ಉಪ ದಲಾಲ ಆಗಿ ಫೆಡರಲ್ ಬ್ಯಾಂಕು ಕಾರ್ಯನಿರ್ವಹಿಸಿತು. ★

## ಬೆಳೆವಿಮೆ ಯೋಜನೆ

ಬರುವ ಹಂಗಾಮಿನಿಂದ ಹತ್ತಿ ಹಾಗೂ ಕಬ್ಬು ಸೇರಿದಂತೆ ಎಲ್ಲಾ ಬೆಳೆಗಳನ್ನು ಒಳಗೊಂಡ ಬೆಳೆ ವಿಮೆ ಯೋಜನೆಯೊಂದನ್ನು ಜಾರಿಗೆ ತರಲು ಸರಕಾರ ಯೋಜಿಸಿದೆ. ★

## ರಾಷ್ಟ್ರೀಯ ವಸತಿ ಬ್ಯಾಂಕ್ : ಯೋಜನೆ

ವರ್ಷವೊಂದಕ್ಕೆ ಒಂದು ದಶಲಕ್ಷ ವಸತಿ ಘಟಕಗಳಿಗೆ ಧನಸಹಾಯ ನೀಡಲು ಸಂಪನ್ಮೂಲ ರೂಢಿಸಲು ಯೋಜನೆಯೊಂದು ರೂಪಿತವಾಗಿದೆ. ಈ ಯೋಜನೆಯಡಿ ವ್ಯಕ್ತಿಯೊಬ್ಬ ಪ್ರತಿ ತಿಂಗಳೂ ರೂ 50ರ ಗುಣಕದಲ್ಲಿ ಗರಿಷ್ಠ ರೂ 2,000 ಮೀರದಂತೆ ಕನಿಷ್ಠ 5 ವರ್ಷಕ್ಕೆ ಉಳಿತಾಯ ಖಾತೆ ತೆರೆಯಬಹುದು. ಇದಕ್ಕೆ ಶೇ 11ರ ಬಡ್ಡಿ ದೊರೆಯುತ್ತದೆ. 5 ವರ್ಷದ ನಂತರ ಖಾತೆದಾರ ಗರಿಷ್ಠ 3 ಲಕ್ಷ ರೂ.ಗಳ ಸಾಲಕ್ಕೆ ಅರ್ಹನಾಗುತ್ತಾನೆ. ಸಾಲದ ಮೇಲೆ ಶೇ. 11.5ರಿಂದ 13ರಷ್ಟು ಬಡ್ಡಿ ವಿಧಿಸಲಾಗುತ್ತದೆ. ★

## ಬ್ಯಾಂಕ್ ಅಧಿಕಾರಿಗಳ ಮುಷ್ಕರ

ವೇತನ ಪರಿಷ್ಕರಣಕ್ಕೆ ಸಂಬಂಧಿಸಿದಂತೆ ನಡೆಯುತ್ತಿರುವ ಮಾತುಕತೆಗಳಲ್ಲಿ ಭಾರತದ ಬ್ಯಾಂಕುಗಳ ಸಂಘದ ನಿಲುವನ್ನು ಪ್ರತಿಭಟಿಸಿ ಸುಮಾರು 2 ಲಕ್ಷ ಬ್ಯಾಂಕ್ ಉದ್ಯೋಗಿಗಳು ಜನವರಿ 25ರಂದು ಒಂದುದಿನದ ಮುಷ್ಕರ ನಡೆಸಿದರು. ಅಖಿಲಭಾರತ ಬ್ಯಾಂಕ್ ಅಧಿಕಾರಿಗಳ ಒಕ್ಕೂಟ ಈ ಮುಷ್ಕರಕ್ಕೆ ಕರೆ ನೀಡಿತ್ತು. ನಿಯಮದಷ್ಟೆ ಕೆಲಸ, ಹಾಗೂ ಮತ್ತೆ ಫೆಬ್ರವರಿ ತಿಂಗಳಲ್ಲಿ ಒಂದು ದಿನದ ಮುಷ್ಕರ ನಡೆಸುವುದಾಗಿ ಒಕ್ಕೂಟದ ವಕ್ತಾರರು ತಿಳಿಸಿದ್ದಾರೆ. ★

## ಬ್ಯಾಂಕ್ ಅಧಿಕಾರೇತರ ಸಿಬ್ಬಂದಿ ವೇತನ ಒಪ್ಪಂದದ ಬಗ್ಗೆ ವಿರೋಧ

ಭಾರತೀಯ ಜೀವವಿಮಾ ನಿಗಮದ ಸಿಬ್ಬಂದಿಗೆ ಹೆಚ್ಚಿನ ವೇತನ ನೀಡಿರುವುದರ ಹಿನ್ನೆಲೆಯಲ್ಲಿ ಬ್ಯಾಂಕು ಉದ್ಯೋಗಿಗಳಿಗೂ ಹೆಚ್ಚಿನ ದರದಲ್ಲಿ ತುಟ್ಟಿಭತ್ಯ ನೀಡಬೇಕೆಂದು ಬ್ಯಾಂಕ್ ಉದ್ಯೋಗಿಗಳ ಕಾರ್ಮಿಕ ಸಂಘಗಳು ಭಾರತದ ಬ್ಯಾಂಕಿಂಗ್ ಸಂಘವನ್ನು ಒತ್ತಾಯಿಸಿವೆ. ★

## ಅನಿವಾಸಿ ಭಾರತೀಯ ಬಾಂಡುಗಳು

ಅನಿವಾಸಿ ಭಾರತೀಯ ಬಾಂಡುಗಳನ್ನು ಹೆಚ್ಚು ಆಕರ್ಷಕವಾಗಿ ಮಾಡಲು ಕೆಲವು ಮಾರ್ಪಾಡುಗಳನ್ನು ಮಾಡಲಾಗಿದೆ. ಈಗ ಬಾಂಡುಗಳನ್ನು ಯಾವುದೇ ಕಾಲಮಿತಿ ಇಲ್ಲದೆ ಹಿಂಪಡೆಯಬಹುದು. ಆದರೆ ಅದಕ್ಕೆ ಕಡಿಮೆ ಬಡ್ಡಿ ದೊರೆಯುತ್ತದೆ. ಬಾಂಡುಗಳನ್ನು ಆಧಾರವಾಗಿ ನೀಡಿ ಸಾಲ ಸೌಲಭ್ಯ ಪಡೆಯಬಹುದು. ಬಾಂಡುಗಳ ಮೇಲಿನ ಬಡ್ಡಿಯನ್ನು ವರ್ಷಕ್ಕೊಂದಾವರ್ತಿ ನೀಡಲು ಅವಕಾಶ ಕಲ್ಪಿಸಲಾಗಿದೆ. ★

---


**ನಮೂನೆ IV**

(ನಿಯಮ 8ನ್ನು ನೋಡಿ)

1 ಪ್ರಕಟಣೆಯ ಸ್ಥಳ : ಬೆಂಗಳೂರು 560 002

2 ನಿಯತಕಾಲಿಕದ ಅವಧಿ : ತ್ರೈಮಾಸಿಕ

3 ಮುದ್ರಕರ ಹೆಸರು : ಶ್ರೀ ಜಿ. ಎಚ್. ಕೃಷ್ಣಮೂರ್ತಿ. ರಾಷ್ಟ್ರಕತೆ : ಭಾರತೀಯ. ವಿಳಾಸ : ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್ ಗಡಿಯಾರ ಗೋಪುರ ಬಳಿ ಅಶೋಕ ರಸ್ತೆ, ಮೈಸೂರು 570 001

4 ಪ್ರಕಾಶಕರ ಹೆಸರು : ಶ್ರೀ ಪಾ. ರಾಜಗೋಪಾಲ. ರಾಷ್ಟ್ರಕತೆ : ಭಾರತೀಯ. ವಿಳಾಸ : ಪ್ರಧಾನಕಾರ್ಯದರ್ಶಿ ಸಮನ್ವಯ ಸಮಿತಿ (ನೋಂ), ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು, 22, ಜಯಚಾಮರಾಜ ರಸ್ತೆ, ಬೆಂಗಳೂರು 560 002

5 ಸಂಪಾದಕರ ಹೆಸರು : ಶ್ರೀ ಎಚ್ಚೆಸ್ಕೆ (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್). ರಾಷ್ಟ್ರಕತೆ : ಭಾರತೀಯ. ವಿಳಾಸ : 41 ಆರನೆಯ ಮುಖ್ಯ ರಸ್ತೆ, ಸರಸ್ವತೀಪುರಂ, ಮೈಸೂರು 570 009

6 ಒಟ್ಟು ಬಂಡವಾಳದ ಶೇ. 1ಕ್ಕಿಂತ ಹೆಚ್ಚಿನ ಭಾಗ ಹೊಂದಿರುವ ಷೇರುದಾರರು ಅಥವಾ ಪಾಲುದಾರರು ಹಾಗೂ ಪತ್ರಿಕೆಯ ಒಡೆತನ ಹೊಂದಿರುವವರ ಹೆಸರು ವಿಳಾಸಗಳು : ಸಮನ್ವಯ ಸಮಿತಿ (ನೋಂ), ಆಶ್ರಯ : ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರಶಾಖೆ, 22, ಜಯಚಾಮರಾಜ ರಸ್ತೆ, ಬೆಂಗಳೂರು 560 002

ನಾನು, ಪಾ. ರಾಜಗೋಪಾಲ, ಮೇಲ್ಕಾಣಿಸಿದ ವಿವರಗಳು ನನ್ನ ನಂಬಿಕೆ ಮತ್ತು ತಿಳಿವಳಿಕೆಯಂತೆ ನಿಜವಾದವೆಂದು ಈ ಮೂಲಕ ಘೋಷಿಸುತ್ತೇನೆ.

ಪಾ. ರಾಜಗೋಪಾಲ
ಪ್ರಕಾಶಕ


---

R. N. 36702/83



PRINTED BY G. H. KRISHNAMURTHY, MYSORE PRINTING AND PUBLISHING HOUSE, CLOCK TOWER SQUARE, MYSORE-1